

ತಮ್ಮ

ಬಾಬು

ಗೆ

ಅವನ ಹದಿಮೂರನೆ ಹುಟ್ಟಿದ ಹಬ್ಬದ ಕಾಣಿಕೆಯಾಗಿ

# ಪ್ರಪಂಚದ ಕಥೆ

ಭಾಗ ೧



ನಭ

ಗ್ರಾಮಸೇವಾ ನಿಲಯ, ಮೈಸೂರು.

# ಮೊದಲ ಮಾತು

ಪ್ರಪಂಚದ ಕಥೆ ಅಗಾಧವಾದುದು. ನುರಿತ ಇತಿಹಾಸಕಾರನೂ ವಿಜ್ಞಾನಿಯೂ ಸಾಹಿತಿಯೂ ಆದವನು ಅದನ್ನು ಬರೆದರೆ ಸರಿ. ಆಗ ಅದು ಎಲ್ಲ ವಿಧದಲ್ಲೂ ಅಚ್ಚುಕಟ್ಟಾಗಿರುತ್ತದೆ. ಕನ್ನಡದಲ್ಲಿ ಅಂತಹ ಪುಸ್ತಕ ಬೇಕಾಗಿದೆ. ಅದು ಇದುವರೆಗೂ ಬರಲಿಲ್ಲವೆಂಬ ಹಂಬಲವೇ ಈ ಪುಸ್ತಕ ಬರೆಯಲು ನನಗಿರುವ ಅರ್ಹತೆ. ಆದರಿಂದ ನನ್ನ ತಿಳಿವಳಿಕೆಗಿಂತಲೂ ಆ ವಿಷಯದ ಪುಸ್ತಕಗಳೇ ಈ ಬರವಣಿಗೆಗೆ ಹೆಚ್ಚು ಆಧಾರವೆಂಬುದನ್ನು ಹೇಳಬೇಕಾಗಿಲ್ಲ. ಪ್ರಪಂಚದ ಕಥೆಯ ವಿಷಯದಲ್ಲಿ ಇದಕ್ಕಿಂತಲೂ ಉತ್ತಮವಾದ ಪುಸ್ತಕದ ಅವಶ್ಯಕತೆ ನಮಗಿದೆ. ಹಾಗೆ ಬಂದರೆ ನನಗೆ ತುಂಬ ಸಂತೋಷ.

ಈ ನನ್ನ ಕೆಲಸದಲ್ಲಿ ಗೆಳೆಯರು ಹಲವರ ಪ್ರೀತಿಯ ನೆರವು ದೊರಕಿದೆ. ಆದರೂ ಈ ಪುಸ್ತಕದಲ್ಲಿ ಓದುಗರನ್ನು ಪೀಡಿಸುವ ಅಚ್ಚಿನ ಮತ್ತಿತರ ತಪ್ಪಿಲ್ಲದಂತೆ ಮಾಡಲು ನಾನು ಶಕ್ತನಾಗಲಿಲ್ಲ. ಅದಕ್ಕಾಗಿ ನನಗೆ ನಾಚಿಕೆಯಾಗಿದೆ.

ಈ ಪುಸ್ತಕವನ್ನು ನಮ್ರತೆಯಿಂದ ಕನ್ನಡಿಗರ ಮುಂದಿಡುತ್ತಿದ್ದೇನೆ. ಆದಷ್ಟು ಬೇಗನೆ ಎರಡನೆಯ ಭಾಗವೂ ಹೊರಗೆ ಬರುವುದು.

ಮೈಸೂರು<br>
೨೬—೧೧—೪೬

ನಭ



## ಪುರಾತನ ಸಂಸ್ಕೃತಿ ಬೆಳವಣಿಗೆಯಲ್ಲಿ ಜರುಗಿದ ಕೆಲವು ಘಟನೆಗಳ ಕಾಲಸೂಚಿ

| | |
|---|---|
| ಮಾನವನಿಗೆ ಕಲಾದೃಷ್ಟಿ ಬಂದದ್ದು | ಕ್ರಿ ಪೂ. ೫೦೦೦೦ ಹಿಂದೆ |
| ನವಶಿಲಾಯುಗ | |
| ಬೆಂಕಿ ಉಪಯೋಗ | ೧೦೦೦೦ ಹಿಂದೆ |
| ವ್ಯವಸಾಯ ಪ್ರಾರಂಭ | |
| ಲೋಹಯುಗ | ೫೦೦೦ ಹಿಂದೆ |
| ಮೂರ್ತಿಪೂಜೆ ಪ್ರಾರಂಭ | ೫೦೦೦ ಹಿಂದೆ |
| ಸಂಸ್ಕೃತಿ: ಈಜಿಪ್ಟಿನ ನೈಲ್‌ನದಿ ಬೈಲು; ಕ್ರೀಟ್ ದ್ವೀಪ; ಮೆಸಪೊಟೋಮಿಯದ ಯೂಪ್ರಟಿಸ್ ಟೈಗ್ರಿಸ್ ನದಿಗಳ ಬಯಲು; ಭಾರತದ ಸಿಂಧೂನದಿಯ ಬಯಲು—ಹರಪ್ಪ, ಮೊಹೆಂಜೊದಾರೊ; ಚೀನದ ಹಳದಿ ನದಿ ಕಣಿವೆ | ೪೦೦೦ ಹಿಂದೆ |
| ಪಂಚಾಂಗ ರಚನೆ | ೪೦೦೦ ಹಿಂದೆ |
| ಆರ್ಯರು ವಲಸೆ ಹೊರಟದ್ದು | ೩೦೦೦ ಹಿಂದೆ |
| ಆರ್ಯರು ಭಾರತಕ್ಕೆ ಬಂದದ್ದು; ವೇದಗಳ ಕಾಲ | ೨೫೦೦ ಹಿಂದೆ |
| ಪಿರಮಿಡ್ ಕಟ್ಟಡ | ೨೫೦೦ ಹಿಂದೆ |
| ಬರವಣಿಗೆ ಪ್ರಾರಂಭ | ೨೫೦೦ ಹಿಂದೆ |
| ಕ್ರೀಟ್‌ನಲ್ಲಿ ಮೆನಾಸ್ ಸಂಸ್ಕೃತಿ | ೨೦೦೦ ಹಿಂದೆ |
| ರಾಮಾಯಣ | ೨೦೦೦ ಹಿಂದೆ |
| ಗ್ರೀಸಿನಲ್ಲಿ ಕ್ರೀಟ್ ಸಂಸ್ಕೃತಿ | ೨೦೦೦ ಹಿಂದೆ |
| ಮಹಾಭಾರತ | ೧೫೦೦ ಹಿಂದೆ |
| ಫಿನಿಷಿಯನ್ ವಸಾಹತುಗಳ ಆಡಳಿತ | ೧೫೦೦ ಹಿಂದೆ |
| ಈಜಿಪ್ಟಿನಲ್ಲಿ ಯಹೂದ್ಯರು | ೧೫೦೦ ಹಿಂದೆ |
| ಗ್ರೀಸಿನಮೇಲೆ ಡೋರಿಯನ್ನರ ಧಾಳಿ | ೧೫೦೦ ಹಿಂದೆ |
| ಚೀನದಲ್ಲಿ ಚೌ ಸಾಮ್ರಾಜ್ಯ | ೧೧೦೦ ಹಿಂದೆ |
| ಸಾಲಮನ್‌ರಾಜ ಪಾಲಸ್ಟಾನಿನಲ್ಲಿ | ೧೦೦೦ ಹಿಂದೆ |
| ಕ್ರೀಟ್ ರಾಜಧಾನಿ ನಾಸಸ್ ಪತನ | ೧೦೦೦ ಹಿಂದೆ |
| ಕಾರ್ಥೇಜಿನ ಸ್ಥಾಪನೆ | ೮೦೦ ಹಿಂದೆ |
| ಗ್ರೀಸಿನಲ್ಲಿ ಒಲಂಪಿಕ್ ಆಟಗಳ ಪ್ರಾರಂಭ | ೭೭೬ ಹಿಂದೆ |
| ರೋಂ ಪಟ್ಟಣ ಸ್ಥಾಪನೆ | ೭೫೩ ಹಿಂದೆ |
| ಗ್ರೀಸ್ ವಸಾಹತುಗಳ ಪ್ರಾರಂಭ | ೭೩೫ ಹಿಂದೆ |
| ಸೆಲೆ ಸಿಗದ ಯಹೂದಿಗಳು ಬ್ಯಾಬಿಲೋನಿಗೆ ಬಂದದ್ದು | ೬೦೦ ಹಿಂದೆ |
| ಚಾಲ್ಡಿಯನ್ ಸಾಮ್ರಾಜ್ಯ ಸ್ಥಾಪನೆ | ೬೦೦ ಹಿಂದೆ |

ಮಂಗೋಲಿಯನರು

ಆರ್ಯ ಪಶುಪಾಲಕರು

ಮೆಸಪೊಟೋಮಿಯ

ಚೀನಾ

ಈಜಿಪ್ಟ್

ಪಶುಪಾಲಕರು

ಭಾರತ ಭೂಮಿ

ಈ ಭೂಪಟದಲ್ಲಿ ಕಪ್ಪಾಗಿಕಾಣುವ ಪ್ರದೇಶಗಳಲ್ಲಿ ಪುರಾತನ ಸಂಸ್ಕೃತಿ ಹರಡಿತ್ತು

ಕ್ರಿಸ್ತ ಪೂರ್ವ

ಉಷಾ ಮಾನವ
೫೦,೦೦೦ ಹಿಂದೆ

ವಾನರ
೫,೦೦,೦೦೦ ಹಿಂದೆ

ಸಸ್ತನಿ ಪ್ರಾಣಿಗಳ ಯುಗ
೫,೦೦,೦೦,೦೦೦ ಹಿಂದೆ

ಪಕ್ಷಿಗಳ ಯುಗ
೧೦,೦೦,೦೦,೦೦೦ ಹಿಂದೆ

ಉರಗ ಯುಗ
೧೫,೦೦,೦೦,೦೦೦ ಹಿಂದೆ

ಮತ್ಸ್ಯ ಯುಗ
೩೬,೦೦,೦೦,೦೦೦ ಹಿಂದೆ

ಜೀವೋದಯ
೧೦೦,೦೦,೦೦,೦೦೦ಹಿಂದೆ

ಭೂಮಿಯಲ್ಲಿ ನೀರು
ಕೂಡಿದುದು
೧೫೦,೦೦,೦೦,೦೦೦ಹಿಂದೆ

ಭೂಮಿಯ ಜನನ
೨೦೦,೦೦,೦೦,೦೦೦ ಹಿಂದೆ



ಜೀವ ವಿಕಾಸ ವೃಕ್ಷ

# ವಿಷಯ

# ಗ್ರಂಥಋಣ

Outline of History

H G. Wells

A Father's letters to his Daughter

Pandit JawaharLal Nehru

Glimpses of World History

Pandit JawaharLal Nehru

A Brief History of Civilization

J. S. Hoyland

An Outline of Universe

J. G. Crowther

The Modern Encyclopedia for Children

Collins

The Expanding Universe

Sir Athur Eddington

The Martyrdom of Man

Winwood Read

Men of Dawn

Dorothy Davison

History of the world

Ed. W. N. Weach

ಜೀವದ ಉತ್ಪತ್ತಿ ಮತ್ತು ಪರಿವರ್ತನೆ

ಎಚ್. ನಾರಾಣರಾವ್

ಕೆ. ಪಿ. ರಾಮನಾಥಯ್ಯ

Encyclopedia of Modern Knowledge

Ed Sir John Hammerton

The Miracle of life

Harold Wheeler

# ಬ್ರಹ್ಮಾಂಡ

*ಆಗ ಮೃತ್ಯುವೂ ಇರಲಿಲ್ಲ ಅಮರತ್ವವೂ ಇರಲಿಲ್ಲ
ರಾತ್ರಿ ಹಗಲಿನ ಸಂಧ್ಯೆಯ ಸಂಕೇತ ಕೂಡ ಇಲ್ಲ
ತನ್ನದೇ ಶಕ್ತಿಯಿಂದ ಜಾಗೃತವಾಗಿದ್ದ ಚೇತನ ಒಂದೇ ಇದ್ದದ್ದು
ಅದು ಹೊರತು ಬೇರೊಂದು ಮತ್ತೊಂದು ಯಾವುದೊಂದೂ ಇರಲಿಲ್ಲ.

## ಪುರಾಣ ಕಥೆಗಳು

ಆದಿಯಲ್ಲಿ ಮಧುಕೈಟಭರೆಂಬ ಕೇಡಿ ಮಹಾರಾಕ್ಷಸರಿದ್ದರು. ಅವರ ಕಾಟ ನೋಡಲಾರದ ಸರ್ವಶಕ್ತನಾದ ದೇವರು ಮಹಾಕಾರವನ್ನು ತಾಳಿ ತನ್ನ ಒಂದೊಂದು ಕೈಯಲ್ಲಿ ಒಬ್ಬೊಬ್ಬರನ್ನು ಹಿಡಿದನು. ಇಬ್ಬರನ್ನೂ ಒಟ್ಟಿಗೆ ಜಜ್ಜಿದನು. ಆದರಿಂದ ಸತ್ತ ಆ ಇಬ್ಬರು ರಾಕ್ಷಸರ ದೇಹವನ್ನು ರೊಟ್ಟಿಯಂತೆ ತಟ್ಟಿದನು. ಆ ರೊಟ್ಟಿಯನ್ನು ಭೂಮಿ ಮಾಡಿದನು. ಅದರಮೇಲೆ ತನ್ನ ಆಕಾರದಂತೆ ಪ್ರಾಣಿಗಳನ್ನು ಸೃಷ್ಟಿಸಿದನು. ಆ ಪ್ರಾಣಿಗಳೇ ಮಾನವಕುಲದ ಆದಿಪುರುಷರು. ಆಮೇಲೆ ಇವರಿಗೆ ಅನುಕೂಲವಾಗಿ ಸಸ್ಯವರ್ಗವನ್ನೂ ಮಿಕ್ಕ ಪ್ರಾಣಿವರ್ಗವನ್ನೂ ನಿರ್ಮಿಸಿದನು.

ಅಪಾರ ಜಲರಾಶಿಯಲ್ಲಿ ಬಲು ದೊಡ್ಡ ಆಮೆಯೊಂದು ತೇಲುತ್ತಿದೆ. ಅದರಮೇಲೆ ಎಂಟುದಿಕ್ಕಿಗೆ ಎಂಟು ಮಹಾಗಜಗಳು ಆಧಾರವಾಗಿ ನಿಂತಿವೆ. ಆ ದಿಗ್ಗಜಗಳ ಆಧಾರದಮೇಲೆ ಆದಿಶೇಷನೆಂಬ ಘಟ

---

*ನ ಮೃತ್ಯು ರಾಸೀದಮೃತಂ ನ ತರ್ಹಿ
ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ
ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥ ಋಗ್ವೇದ.



1

ಸರ್ಪ ತೆಕ್ಕೆಹೊಡಿ ತನ್ನ ಸಹಸ್ರತಲೆಯ ಹೆಡೆಯೆತ್ತಿ ನಿಂತಿದೆ. ಆ ಸಹಸ್ರ ಮುಖಿ ಆದಿಶೇಷನ ಹೆಡೆಯಮೇಲೆ ಭೂಮಿ ಚಾಪೆಯಂತೆ ಹಾಸಿ ಕೊಂಡಿದೆ.

ಈ ಕಥೆಗಳನ್ನು ಪುರಾಣಗಳೇ ನಮಗೆ ಇತಿಹಾಸದಂತಿದ್ದಾಗ ನಂಬಿದ್ದೆವು. ಎಲ್ಲಾ ದೇಶಗಳ ಪುರಾಣದಲ್ಲಿಯೂ ಭೂಮಿಯ ಜನನ, ಅದು ಇರುವ ಸ್ಥಿತಿ ಮತ್ತು ಮಾನವನ ಉದ್ಭವ ಇವುಗಳ ವಿಷಯದಲ್ಲಿ ಈ ಬಗೆಯ ಕಥೆಗಳಿವೆ.

## ಇದು ಹೇಗೆ ? ಏಕೆ ?

ಜನಸಾಮಾನ್ಯರಲ್ಲಿ ಇದು ಹೇಗೆ ? ಏಕೆ ? ಎಂಬ ಸಂದೇಹ, ಕುತೂಹಲ ಮೂಡಿದಾಗ ಆಯಾ ಕಾಲದ ಜಾಣರು ತಮ್ಮ ಜಾಣ್ಮೆಯಿಂದ ಊಹಿಸಿ ಜನತೆಯ ಸಂದೇಹ ನಿವೃತ್ತಿ ಮಾಡಲು ಈ ಬಗೆಯ ಕಥೆ ಕಟ್ಟಿದರು.

ಜನರ ಬುದ್ಧಿ ಬೆಳೆದಂತೆ, ವಿಜ್ಞಾನದೃಷ್ಟಿ ಬಂದಂತೆ ಮೂಢನಂಬಿಕೆಗಳು ಅಳಿಯುವವು. ವಿಜ್ಞಾನಿಗಳು ಈಗ್ಗೆ ಒಂದು ಶತಮಾನದ ಹಿಂದಿನಿಂದಲೂ ತಮ್ಮಬುದ್ಧಿಶಕ್ತಿಯನ್ನು ಉಪಯೋಗಿಸಿ ಆಧುನಿಕ ಸಲಕರಣೆಗಳ ಸಹಾಯದಿಂದ ಸಂಶೋಧನೆಯ ಮೇಲೆ ಸಂಶೋಧನೆ ನಡೆಸಿ ಭೂಮಿಯ ಜನನ ಹೇಗಾಯಿತು ಎಂಬುದನ್ನು ಗೊತ್ತುಹಚ್ಚಿದಾರೆ. ಆಮೇಲೆ ಭೂಮಿಯಲ್ಲಿ ಸಸ್ಯಗಳು ಹೇಗೆ ಕಾಣಿಸಿಕೊಂಡವು ? ಪ್ರಾಣಿಗಳು ಹಾಗೂ ಮನುಷ್ಯನ ಸೃಷ್ಟಿ ಹೇಗಾಯಿತು ? ಎಂಬುದನ್ನು ಕಂಡುಹಿಡಿದಿದಾರೆ. ಅಷ್ಟೇ ಅಲ್ಲ, ನಭೋಮಂಡಲದಲ್ಲಿ ಮಿನುಗುವ ತಾರೆಗಳ ವಿಷಯವನ್ನು ಪತ್ತೆ ಹಚ್ಚಿದಾರೆ. ಸೂರ್ಯ, ಚಂದ್ರ, ಗ್ರಹಗಳ ವಿಷಯವೂ ಗೊತ್ತಾಗಿದೆ.

## ಆದಿಯಲ್ಲಿ

ಇನ್ನು ನಾವು ಭೂಮಿಯ ಕಥೆಯ ಆದಿಗೆ ಹೋಗೋಣ. ಅದೆಷ್ಟೋ ಕೋಟಿ ಕೋಟಿ ಶತಮಾನಗಳ ಹಿಂದಿನ ಮಾತು. ಆಗ

ನಮ್ಮ ಆಕಾಶದಲ್ಲಿ ಈಗಿರುವಂತೆ ಸೂರ್ಯ ಚಂದ್ರರಾಗಲಿ ಭೂಮಿಯಾಗಲಿ ಇರಲಿಲ್ಲ. ಅಗ್ನಿಮಯವಾದ ಮೋಡದಂತೆ ಏನೋ ಪರಮಾಣು ಸಮೂಹ ಆಕಾಶದಲ್ಲೆಲ್ಲಾ ತುಂಬಿಹೋಗಿತ್ತು. ಪ್ರತಿ ಪರಮಾಣುವಿನಲ್ಲೂ ಒಂದು ಅಗಾಧವಾದ ಶಕ್ತಿಯಿತ್ತು. ಆ ಶಕ್ತಿಯ ಅಂತರಾಟಕ್ಕೆ ಸಿಕ್ಕಿದ ಆ ಪರಮಾಣು ಸಮೂಹ ಹರಿದು ಹಂಚಿ, ಹೊಗೆಯಂತೆ ದಿಕ್ಕು ದಿಕ್ಕಿಗೆ ಚದುರಿ ಹರಿದಾಡುತಿತ್ತು.

**ಪರಮಾಣು**



ಇಲ್ಲಿ ಎರಡು ಪರಮಾಣುಗಳ ರಚನೆ ಹೇಗಿರುವುದೆಂಬುದನ್ನು ಅದೆಷ್ಟೋ ಪ್ರಮಾಣ ದೊಡ್ಡದಾಗಿ ತೋರಿಸಿದೆ.

ಪರಮಾಣುವಿನ ವಿಷಯ ಕೊಂಚ ತಿಳಿದು ಮುಂದರಿಯೋಣ. ಪರಮಾಣು ಅತಿ ಸೂಕ್ಷ್ಮವಾದುದು; ಗೋಳಾಕಾರವಾದುದು. ಒಂದು ಅಂಗುಲವನ್ನು ಐದುಕೋಟಿ ಪಾಲುಮಾಡಿದರೆ ಒಂದುಪಾಲು ಎಷ್ಟೋ ಅಷ್ಟು ಒಂದು ಪರಮಾಣುವಿನ ವ್ಯಾಸ. ತೂಕ ಒಂದು ಗುಲಗಂಜಿಯ ಹೇಳಲಾರದಷ್ಟು ಪಾಲುಗಳ ಒಂದು ಭಾಗದಷ್ಟು. ಪರಮಾಣುಗಳು ಸೇರಿ ಅಣು, ಅಣುಗಳು ಸೇರಿ ವಸ್ತುಗಳಾಗಿವೆ. ಒಂದು ಗುಲಗಂಜಿಯ ಗಾತ್ರ ಕಬ್ಬಿಣ ತೆಗೆದುಕೊಂಡರೆ ಅದರಲ್ಲಿ ಕೋಟಿಗಟ್ಟಲೆ ಪರಮಾಣುಗಳಿವೆ.

ನಾವು ನೋಡುವ ವಸ್ತುಗಳು ನಮಗೆ ಕಾಣುವಂತೆ ಗಟ್ಟಿಯಾಗಿಲ್ಲ. ಬರಿ ಟೊಳ್ಳು. ಆ ಟೊಳ್ಳು ನಮ್ಮಿ ಕಣ್ಣಿಗೆ ಕಾಣುವುದಿಲ್ಲ. ಒಂದು ಮೀನುಬಲೆಯಲ್ಲಿ ದಾರದ ಗಂಟುಗಳು ಇರುವಂತೆ ಪದಾರ್ಥದಲ್ಲಿ ಅಣುಗಳು ಸೇರಿವೆ. ಆ ಅಣುಗಳೂ ಗಟ್ಟಿಯಲ್ಲ. ಅವೂ ಟೊಳ್ಳೇ. ಅವುಗಳಲ್ಲಿರುವ ಪರಮಾಣುವೂ ಟೊಳ್ಳೇ. ಹೀಗಾಗಿ ಒಂದು ಮಣ ಕಬ್ಬಿಣದಲ್ಲಿರುವ ಆಕಾಶವನ್ನೆಲ್ಲಾ ತೆಗೆದುಬಿಟ್ಟರೆ ಉಳಿಯುವ ಗಟ್ಟಿ ಕಡಲೆಕಾಳಿಗೂ ಸಣ್ಣವಂತೆ.

ಬ್ರಹ್ಮಾಂಡದಲ್ಲಿ ಎಲ್ಲ ವಸ್ತುಗಳಿಗೂ ಮೂಲವಾದ ಪರಮಾಣುವಿನ ರಚನೆಯನ್ನೇ ಸೂರ್ಯನೂ, ಬ್ರಹ್ಮಾಂಡವೂ ಹೋಲುತ್ತವೆ. ಒಂದು ಪರಮಾಣುವನ್ನು ತೆಗೆದುಕೊಂಡರೆ ಅದರಲ್ಲಿ ಮುಖ್ಯವಾಗಿ ಪ್ರೋಟಾನ್ ಮತ್ತು ಎಲೆಕ್ಟ್ರಾನ್ ಎಂಬ ವಿದ್ಯುತ್‌ಕಣಗಳಿರುತ್ತವೆ. ಸೂರ್ಯನ ಸುತ್ತ ಗ್ರಹಗಳು ಸುತ್ತುವಂತೆ ಪ್ರೋಟಾನಿನ ಸುತ್ತ ಎಲೆಕ್ಟ್ರಾನ್‌ಗಳು ಸುತ್ತುತ್ತಿರುತ್ತವೆ. ಒಂದು ಲೋಹದ ಚೂರೋ, ಕಲ್ಲಿನ ಚೂರೋ ಯಾವುದೋ ಒಂದು ವಸ್ತುವಿನ ಚೂರೋ ಅಲುಗದೆ ಬಿದ್ದಂತೆ ನಮಗೆ ಕಂಡರೂ ಅದರಲ್ಲಿ ತುಂಬಿರುವ ಪರಮಾಣುವಿನಲ್ಲಿರುವ ಎಲೆಕ್ಟ್ರಾನುಗಳ ಓಡಾಟ ನಡೆಯುತ್ತಲೇ ಇರುತ್ತದೆ.

ಇವೆಲ್ಲ ನಾವು ನಂಬಲಾರದ ಆಶ್ಚರ್ಯಗಳಾಗಿ ಕಾಣುತ್ತವೆ. ಆದರೆ ಈ ಸತ್ಯವನ್ನು ಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಈ ಗುಟ್ಟು ತಿಳಿಯ ಹೊರಟರೆ ತುಂಬ ಸ್ವಾರಸ್ಯವಾಗಿದೆ. ಆದರೆ ಇಲ್ಲಿ ಇಷ್ಟು ಸಾಕು. ನಾವೀಗ ಆದಿಕಾಲಕ್ಕೆ ಹೋಗೋಣ.

## ಸೂರ್ಯ

ಕಾಲ ಕಳೆದಂತೆ ವಾತಾವರಣದ ಉಷ್ಣ ಕೊಂಚ ಕಡಮೆಯಾಯಿತು. ಆಕಾಶವನ್ನೆಲ್ಲ ತುಂಬಿ ಅತ್ತಿಂದಿತ್ತ ಹಾರಾಡುತ್ತಿದ್ದ ಪರಮಾಣುಗಳು ತಮ್ಮಲ್ಲುಂಟಾದ ಒಂದನ್ನೊಂದು ಆಕರ್ಷಿಸುವ ಶಕ್ತಿಯನ್ನು

ಅನುಸರಿಸಿ ಒಂದೊಂದುಕಡೆ ಒಟ್ಟುಗೂಡಿದವು. ಹೀಗೆ ಒಟ್ಟುಗೂಡಿದ ಪರಮಾಣುಗಳ ಮೊತ್ತಗಳೊಂದೊಂದೂ ಒಂದೊಂದು ಗೋಳಾಕಾರವನ್ನು ಹೊಂದಿದವು. ಕಾಲ ಕಳೆದಂತೆ ಕ್ರಮೇಣ ಅವು ಸಂಕುಚಿತವಾಗ ತೊಡಗಿದವು. ಆ ಗೋಳಗಳಲ್ಲಿ ಅಣುಶಕ್ತಿಯ ಸಂಯೋಗದಿಂದುಂಟಾದ ಅಪಾರ ವಿದ್ಯುಚ್ಛಕ್ತಿಯುಂಟಾಯಿತು. ಅವು ವಿಶ್ವಕಿರಣಗಳನ್ನುಳ್ಳ ಜಾಜ್ವಲ್ಯಮಾನವಾದ ಸೂರ್ಯರಾಗಿ ತಮ್ಮ ಜ್ವಾಲೆಯಿಂದ ಆಕಾಶವನ್ನೇ ಆವರಿಸಿಕೊಂಡವು. ಹೀಗುಂಟಾದ ಗೋಳಗಳಲ್ಲಿ ನಮ್ಮ ಸೂರ್ಯನೂ ಒಂದು. ಇಷ್ಟರಲ್ಲಾಗಲೇ ಇನ್ನೆಷ್ಟೋ ಸೂರ್ಯರು ಉದ್ಭವವಾಗಿ ಅಸಂಖ್ಯಾತ ಸೌರವ್ಯೂಹಗಳ ರಚನೆಯಾಗಿತ್ತು.



ನೀಹಾರಿಕೆ (Nebula) ಅಥವಾ ತಾರಾಮೂಲ ಒಂದು.

ಆಕಾಶದಲ್ಲಿ ಕಾಣುವ ನಕ್ಷತ್ರಗಳೆಲ್ಲಾ ನಮ್ಮ ಸೂರ್ಯನಂತಹ— ಅದಕ್ಕಿಂತಲೂ ದೊಡ್ಡದಾದ ಸೂರ್ಯರು. ಆ ಒಂದೊಂದು ಸೂರ್ಯನ

ಸುತ್ತಲೂ ನಮ್ಮ ಸೂರ್ಯನಿಗಿರುವಂತೆಯೇ ಗ್ರಹಗಳೂ ಉಪಗ್ರಹಗಳೂ ಇರಬಹುದು. ಒಂದೊಂದು ಸೂರ್ಯನೂ ನಮ್ಮ ಸೂರ್ಯನಂತೆಯೇ ಯೋಜನಗಟ್ಟಲೆ ಹಬ್ಬಿರುವ ಜ್ವಾಲೆಯುಳ್ಳದ್ದಾಗಿದೆ. ಹಲವು ಸೂರ್ಯರು ನಮ್ಮ ಸೂರ್ಯನಿಗಿಂತಲೂ ಅದೆಷ್ಟೋ ಬಾರಿ ದೊಡ್ಡದಾಗಿದ್ದರೂ ಅವು ನಮಗೆ ಬಲುಬಲು ದೂರದಲ್ಲಿ ಇರುವುದರಿಂದ ಕಿರುತಾರೆಗಳಾಗಿ ಕಾಣುತ್ತವೆ. ಈ ಸೂರ್ಯ ಒಂದು ರೂಪಿಗೆಬಂದದ್ದು ಕೊಂಚ ಕಾಲ ದಲ್ಲಲ್ಲ. ಪರಮಾಣುಗಳು ಒಟ್ಟು ಸೇರಿ ಜಾಜ್ವಲ್ಯಮಾನ ಸೂರ್ಯ ರಾಗಬೇಕಾಗಿದ್ದರೆ ಅದೆಷ್ಟೋ ಕೋಟಿ ವರ್ಷಗಳು ಆ ಬ್ರಹ್ಮಾಂಡದ ನೀಹಾರಿಕೆಗಳಲ್ಲಿ (Nebula) ಹದಗೊಳ್ಳಬೇಕಾಯಿತು. ಬ್ರಹ್ಮಾಂಡದಲ್ಲಿ ಇಂತಹ ಸೂರ್ಯರನ್ನು ಉತ್ಪತ್ತಿ ಮಾಡುವಕುಲುಮೆಗಳು ಹಿಂದೆ ಅದೆಷ್ಟೋ ತಮ್ಮ ಕೆಲಸಮಾಡಿ ಮುಗಿಸಿ ತೆಪ್ಪಗಾಗಿವೆ. ಈಗ ಅದೆಷ್ಟಿವೆಯೋ ! ಯಾವ ಕಾಲದಿಂದ ನಡೆಯುತ್ತಿವೆಯೋ !!

## ಭೂಮಿಯ ಜನನ

ನಮ್ಮ ಸೂರ್ಯ ಉದ್ಭವವಾಗಿ ಈಗ ಐದುನೂರು ಕೋಟಿ ವರ್ಷಗಳಾದ ವೆಂದು ಊಹೆ. ಈ ನಮ್ಮ ಸೂರ್ಯ ಇತರ ಸೂರ್ಯರಂತೆಯೇ ತನ್ನದೇ ಒಂದು ಆಕರ್ಷಣಶಕ್ತಿಯನ್ನೊಳಗೊಂಡಿತು. ಆದರೂ ಇನ್ನಾವುದೋ ಒಂದು ಸರ್ವಶಕ್ತಿಯ ಹಿಡಿತಕ್ಕೆ ಸಿಕ್ಕಿ ಇತರ ಸೂರ್ಯರಂತೆಯೇ ತನ್ನದೇ ಒಂದು ಪಥದಲ್ಲಿ ಬುಗುರಿಯಂತೆ ತಿರುಗುತ್ತ ಆ ಒಂದು ಕೇಂದ್ರವನ್ನು ಸುತ್ತಲು ಆರಂಭಿಸಿತು. ಹೀಗಿರುವಾಗ ಇದಕ್ಕಿಂತಲೂ ದೊಡ್ಡದಾದ ಒಂದು ಸೂರ್ಯ ತನ್ನ ಸುತ್ತಾಟದಲ್ಲಿ ಇದರ ಹತ್ತಿರದ ತನ್ನ ದಾರಿಯಲ್ಲಿ ಬಂತು. ಆಕರ್ಷಣ ಶಕ್ತಿಯಿಂದ ಒಂದು ಮತ್ತೊಂದರಮೇಲೆ ತಮ್ಮ ಪ್ರಭಾವವನ್ನು ಬೀರಿದವು. ಒಂದನ್ನೊಂದು ತುಯ್ದಾಡಿದವು. ಆ ದೊಡ್ಡ ಸೂರ್ಯನ ಆಕರ್ಷಣಶಕ್ತಿ ಬಲವಾಗಿತ್ತು. ಆದರಿಂದ ನಮ್ಮ

ಸೂರ್ಯನೇ ಪರಿಭವ ಹೊಂದಬೇಕಾಯಿತು. ಆದರೆ ಈ ಸೂರ್ಯನನ್ನೇ ಸೆಳೆದುಬಿಡುವಷ್ಟಿರಲಿಲ್ಲ ಆ ಸೂರ್ಯನ ಶಕ್ತಿ. ಆದರೂ ಈ ಸೂರ್ಯನ ಸಡಿಲವಾಗಿದ್ದ ಭಾಗವನ್ನು ಅಯಸ್ಕಾಂತ ಕಬ್ಬಿಣದ ಚೂರುಗಳನ್ನು ಸೆಳೆಯುವಂತೆ ಸೆಳೆಯಿತು. ಈ ಸೆಳತಕ್ಕೆ ಸಿಕ್ಕದಭಾಗ ನಮ್ಮ ಸೂರ್ಯನಿಂದ ಸರಿದು ದೂರವಾಯಿತು.



ನಮ್ಮ ಸೂರ್ಯನ ಭಾಗ ಮತ್ತೊಂದು
ಸೂರ್ಯನಿಂದ ಎಳೆಯಲಾಗಿದೆ

ಆದರೆ ಇದನ್ನು ಆಕರ್ಷಿಸಿದ ಸೂರ್ಯ ದೂರದೂರ ಸರಿಯಲು ಆ ಭಾಗ ಚೂರು ಚೂರಾಯಿತು. ಇಷ್ಟೇ ಅಲ್ಲ; ಈ ಭಾಗಗಳು ಆ ಸೂರ್ಯನ



ಆ ಸೂರ್ಯ ದೂರ ಸರಿಯಲು ನಮ್ಮ ಸೂರ್ಯನಿಂದ ಬೇರೆಯಾದಭಾಗ ಚೂರುಚೂರಾಗಿ
ಗ್ರಹಗಳಾದದ್ದು

ಆಕರ್ಷಣಶಕ್ತಿಗೆ ಮೀರಿದವು. ಹೀಗೆ ಹಾರಿ ಸೂರ್ಯನಿಂದ ದೂರಸರಿದ ಒಂದೊಂದು ತುಣುಕೂ ತಾನು ಎಲ್ಲಿಂದ ಹಾರಿಬಂತೋ ಆ ಸೂರ್ಯನ ಆಕರ್ಷಣಶಕ್ತಿಗೇ ಒಳಗಾಗಿ ಅದರ ಸುತ್ತಲೂ ತಿರುಗಲು ಪ್ರಾರಂಭಿಸಿತು. ಹೀಗೆ ಸೂರ್ಯನಿಂದ ಸಿಡಿದ ತುಂಡುಗಳಲ್ಲಿ ನಮ್ಮ ಭೂಮಿಯೊಂದು.

## ಆಕರ್ಷಣ ಶಕ್ತಿ

ಪ್ರತಿಯೊಬ್ಬನೂ ಆಕರ್ಷಣೆಯ ಸೂತ್ರವನ್ನು ಕೇಳಿದ್ದಾನೆ. ಸೃಷ್ಟಿಯಾಗಿರುವ ಎಲ್ಲ ವಸ್ತುಗಳಿಗೂ ಇರುವ ಒಂದನ್ನೊಂದು ಆಕರ್ಷಿಸುವ ಶಕ್ತಿಯೇ ಈ ಸೂತ್ರ. ಭೂಮಿ ನಮ್ಮನ್ನು ಆಕರ್ಷಿಸುತ್ತದೆ. ಭೂಮಿಯ ಆಕರ್ಷಣಶಕ್ತಿಯ ಪ್ರಭಾವದಿಂದ ಗಾಳಿ, ನೀರು ನಮ್ಮ ಉಪಯೋಗಕ್ಕಾಗಿ ಉಳಿದಿವೆ. ನಾವು ಭೂಮಿಯಿಂದ ಗಾಳಿಯೊಳಗೆ ಹಾರಿದಾಗ ಹಾಗೆಯೇ ವಾಯುಮಂಡಲದಲ್ಲೆ ಹಾರುತ್ತಿರುವುದರ ಬದಲು ಮತ್ತೆ ಭೂಮಿಗೆ ಬಂದು ನಿಲ್ಲುತ್ತೇವೆ. ಅಕಸ್ಮಾತ್ ಭೂಮಿಯಲ್ಲಿರುವ ಈ ಆಕರ್ಷಣ ಶಕ್ತಿ ಅಳಿದುಹೋಯಿತೆನ್ನೋಣ. ಆಗ ಏನಾಗುತ್ತದೆ? ಭೂಮಿಯ ಮೇಲಿರುವ ಪ್ರಾಣಿಗಳು, ನೀರು, ಗಾಳಿ ಮೊದಲಾದ ವಸ್ತುಗಳೆಲ್ಲ ಆಕಾಶದಲ್ಲಿ ತೂರಿ ಎಲ್ಲೆಲ್ಲೋ ಏನೇನೋ ಆಗಿಹೋಗಿಬಿಡುತ್ತವೆ. ಅಷ್ಟೇ ಅಲ್ಲ, ಭೂಮಿ ಧೂಳೀಪಟವಾಗಿ ಹೋಗಿಬಿಡುತ್ತದೆ. ಕಾರಣ ಒಂದು ಕಣಕ್ಕೆ ಇನ್ನೊಂದು ಕಣವನ್ನು ಆಕರ್ಷಿಸಿ ಹಿಡಿದು ಒಟ್ಟುಕೂಡಿಸುವ ಶಕ್ತಿಯೇ ನಮ್ಮ ಪ್ರಪಂಚ ಹೀಗೆ ಮುದ್ದೆಯಾಗುಳಿಯಲು ಸಹಾಯಕವಾಗಿದೆ.

ಈ ಆಕರ್ಷಣಶಕ್ತಿಯ ಸೂತ್ರ ಅಖಂಡ ಬ್ರಹ್ಮಾಂಡದಲ್ಲಿ ವ್ಯಾಪಕವಾಗಿದೆ. ಅದರಿಂದಲೇ ಭೂಮಿಯು ಚಂದ್ರನನ್ನೂ ಚಂದ್ರನು ಭೂಮಿಯನ್ನೂ ಆಕರ್ಷಿಸುತ್ತವೆ. ಹೀಗೆಯೇ ಸೂರ್ಯನು ತನ್ನ ವ್ಯೂಹಗಳ ಗ್ರಹಗಳನ್ನೆಲ್ಲ ಆಕರ್ಷಿಸುತ್ತದೆ. ಗ್ರಹಗಳ ವಿಷಯವೂ ಹಾಗೆ. ಇದೇ ಸೂತ್ರ ಮಿಕ್ಕೆಲ್ಲ ನಕ್ಷತ್ರಗಳ ವಿಷಯದಲ್ಲೂ.

ಈ ಬ್ರಹ್ಮಾಂಡದಲ್ಲಿ ಭೂಮಿ, ಚಂದ್ರ, ಸೂರ್ಯ, ನಕ್ಷತ್ರಗಳು, ಗ್ರಹಗಳು ಇವುಗಳೆಲ್ಲಕದ ಇರುವಿಕೆಗೂ ಸುಸೂತ್ರವಾದ ಸಂಚಾರಕ್ಕೂ ಆಧಾರವಾಗಿರುವ ಈ ಆಕರ್ಷಣಶಕ್ತಿಯ ಜ್ಞಾನವನ್ನು ತಿಳಿಸಿಕೊಟ್ಟ ಕೀರ್ತಿ ಇಂಗ್ಲೆಂಡ್‌ನಲ್ಲಿ ಜನ್ಮವೆತ್ತಿದ್ದ ಸರ್ ಇಸಾಕ್ ನ್ಯೂಟನ್ ಮಹಾಶಯನಿಗೆ ಸಲ್ಲುತ್ತದೆ.

ಬ್ರಹ್ಮಾಂಡದಲ್ಲಿ ಊಹೆಗೂ ಸಿಲುಕದ ದೂರದೂರದಲ್ಲಿ ಹರಡಿರುವ ನಕ್ಷತ್ರಗಳು ಇರುವ ದೂರ, ಗಾತ್ರ ಮತ್ತು ಭಾರವನ್ನು ಕಂಡುಹಿಡಿಯಲು ಈ ಆಕರ್ಷಣ ಅಥವಾ ಗುರುತ್ವ ವಾದವೇ ಸಹಾಯಕವಾಗಿದೆ; ವಿಜ್ಞಾನ ಬೆಳವಣಿಗೆಗೆ ಅಪಾರನೆರವಿತ್ತಿದೆ. ಆದಕ್ಕಾಗಿ ನ್ಯೂಟನ್ ಮಹಾಶಯನಿಗೆ ನಾವು ಎಷ್ಟು ಮರ್ಯಾದೆ ಸಲ್ಲಿಸಿದರೂ ಕಮ್ಮಿಯೆ.



ಸರ್ ಇಸಾಕ್ ನ್ಯೂಟನ್

ಜನನ ೧೬೪೨ ಮರಣ ೧೭೨೭.

## ಚಂದ್ರ

ನಮ್ಮ ಭೂಮಿಯನ್ನು ಸೂರ್ಯನೊಡನೆ ಹೋಲಿಸಿವರೆ ಒಂದು ದೊಡ್ಡ ಕಿತ್ತಲೆಹಣ್ಣಿನೊಡನೆ ಗಸಗಸೆ ಹೋಲಿಸಿ ನೋಡುವುದಕ್ಕಿಂತಲೂ ಸಣ್ಣ. ಇಷ್ಟು ಸಣ್ಣದಾದುದರಿಂದ ಭೂಮಿ ಸುತ್ತಣ ವಾತಾವರಣಕ್ಕನುಗುಣವಾಗಿ, ಕುಲುಮೆಯಿಂದ ಹಾರಿದ ಕಿಡಿ ಕುಲುಮೆಗಿಂತ ಬೇಗನೆ ತಣ್ಣಗಾಗುವಂತೆ, ತಣ್ಣಗಾಗ ತೊಡಗಿತು ಭೂಮಿ ಸೂರ್ಯನ ಸೆಳತಕ್ಕೆ ಸಿಕ್ಕಿ ಅದರ ಸುತ್ತ ತನ್ನ ದಾರಿಯಲ್ಲಿ ಬುಗುರಿಯಂತೆ ತಿರುಗುತ್ತಿರುವಾಗ ಆದಾವುದೋ ಒಂದು ಒತ್ತಡಕ್ಕೋ ಸೆಳತಕ್ಕೋ ಸಿಕ್ಕಿತು. ಅದರಿಂದ



ಚಂದ್ರಲೋಕ ನಮಗೆ ಕಾಣುವ ರೀತಿ

ಸ್ವಲ್ಪ ಮಸಕಾಗಿ ಕಾಣುವ ಭಾಗ ಅಲ್ಲಿಯ ಪರ್ವತ, ಕಂದಕಗಳ ನೆರಳು ಬಿದ್ದಿರುವ ಭಾಗ

ಒಂದು ತುಣುಕು ಹಾರಿ ದೂರ ಸರಿಯಿತು. ಆ ತುಂಡು ಭೂಮಿಯ ಆಕರ್ಷಣಶಕ್ತಿಗೆ ಒಳಗಾಗಿ ಅದರ ಸುತ್ತ ಬಳಸಲು ಆರಂಭಿಸಿತು. ಅದೇ ಚಂದ್ರ. ಚಂದ್ರನು ಭೂಮಿಯಿಂದ ಕಳಚಿಕೊಂಡ ಭಾಗ ಈಗಿನ ಶಾಂತಸಾಗರವಿರಬೇಕೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಹೀಗೆ ಭೂಮಿ ಸೂರ್ಯನ ಮಗು, ಚಂದ್ರ ಅದರ ಮೊಮ್ಮಗು ಆದಂತಾಯಿತು.



ಚಂದ್ರಲೋಕದಲ್ಲಿ ಒಂದಾನೊಂದು ಕಾಲದಲ್ಲಿ ಜ್ವಾಲಾಮುಖಿಗಳಾಗಿದ್ದ ಪರ್ವತಗಳು ಈಗ ಆರಿ ತಣ್ಣಗಾಗಿ ಹಿಮುಕಟ್ಟಿವೆ

ಚಂದ್ರ ಭೂಮಿಗಿಂತ ಬಹು ಕಡಿಮೆಗಾತ್ರ ತಾನೆ! ಅದರಿಂದ ಅದು ಭೂಮಿಗಿಂತ ಬಲು ಬೇಗನೆ ಆರಿ ತಣ್ಣಗಾಯಿತು. ಈಗ ಚಂದ್ರ ಮಂಜಿನ ಗಡ್ಡೆಗಿಂತಲೂ ತಂಪು. ಆದರಿಂದಲೇ ಚಂದ್ರಲೋಕದಲ್ಲಿ ಪ್ರಾಣಿಗಳಿಲ್ಲ; ಸಸ್ಯಗಳೂ ಇಲ್ಲ. ಅಲ್ಲಿ ಮೊದಲು ಜ್ವಾಲಾಮುಖಿಪರ್ವತಗಳ ಮಯವಾಗಿತ್ತು. ಈಗದೆಲ್ಲವೂ ಆರಿ ಹಿಮತುಂಬಿದ ಬರೀಬರಡು ನೆಲ. ಭೂಮಿಅಷ್ಟು ತಂಪಾಗಿಲ್ಲ. ಅದು ನಮಗೆ ಗೊತ್ತು. ಭೂಮಿಯ ಒಳಗಡೆ ಇನ್ನೂ ಶಾಖ ತುಂಬಿದೆ. ಭೂಮಿಯಲ್ಲಿ ಆಳ ಹೋದಂತೆ ಶಾಖ ಹೆಚ್ಚುವುದು ಎಂಬುದು ಗಣಿಗಳಲ್ಲಿ ಗೊತ್ತಾಗುವುದು. ಅತಿ ಆಳಕ್ಕೆ ಹೋದರೆ ಕೆಂಚಗೆ ಕಾಯ್ದಿರುವ ಭೂಮಿಯ ಒಳಭಾಗವನ್ನು ನೋಡಬಹುದು. ಜ್ವಾಲಾಮುಖಿಗಳು ಕೆಂಚಗೆ ಕಾಯ್ದು ದ್ರವರೂಪದಲ್ಲಿರುವ ವಸ್ತುಗಳನ್ನುಗುಳುವುದರಿಂದ ಇದು ಸ್ಪಷ್ಟವಾಗುತ್ತದೆ. ಅದೇನಾದರಿರಲಿ. ಈಗ ಸೂರ್ಯ, ಚಂದ್ರ, ಭೂಮಿ ಇವುಗಳ ಜನನ ಮತ್ತು ಸ್ಥಿತಿ ಗೊತ್ತಾಯಿತು.

## ಸೌರವ್ಯೂಹ

ಈಗ ಇನ್ನೂ ದೊಡ್ಡ ವಿಷಯ ತಿಳಿಯಲು ಪ್ರಯತ್ನಿಸೋಣ. ಆ ವಿಷಯ ಸೌರವ್ಯೂಹಕ್ಕೆ ಸಂಬಂಧಪಟ್ಟದ್ದು. ಸೌರವ್ಯೂಹಕ್ಕೆ ಸೂರ್ಯನೇ ಕೇಂದ್ರಶಕ್ತಿ. ನಮ್ಮ ಸೂರ್ಯ ೮,೬೦,೦೦೦ ಮೈಲಿ ವ್ಯಾಸವುಳ್ಳ ಗಾತ್ರದ್ದಾಗಿರುವುದು. ಭೂಮಿಯ ವ್ಯಾಸ ೮೦೦೦ ಮೈಲಿಗಳು. ಅಂದರೆ ಭೂಮಿಯಂತಹ ಗೋಳಗಳು ಸುಮಾರು ೧೩,೦೦,೦೦೦ ಸೇರಿದರೆ ಸೂರ್ಯನ ಗಾತ್ರವಾಗುವುದು. ಸೂರ್ಯನು ಕಾಯ್ದ ಅನಿಲದ ಗೋಳ. ಅದರ ಹೊರಮೈ ೬೦೦೦ ಸೆಂಟಿಗ್ರೇಡ್ ಶಾಖವಿರುವುದು. ಒಳಗಿನ ಶಾಖವೆಂತಹುದೋ ಹೇಳುವುದು ಕಷ್ಟ. ಸುಮಾರು ೪,೮೦,೦೦,೦೦೦° ಸೆಂಟಿಗ್ರೇಡ್ ಶಾಖವಾದರೂ ಇರಬೇಕು. ಸೂರ್ಯನಲ್ಲಿ ಎಲ್ಲವೂ ಪರಮಾಣುವಿನ ಸ್ಥಿತಿಯೂ ಒಡೆದು ವಿದ್ಯುತ್‌ಕಣಸ್ಥಿತಿಯಲ್ಲಿದೆ ಅದರಿಂದಲೇ ಸೂರ್ಯನ ಹೊರಮೈ ಮೇಲೆ ಒಮ್ಮೊಮ್ಮೆ ೫,೦೦,೦೦೦ ಮೈಲಿ

ಎತ್ತರದವರೆಗೆ ಜ್ವಾಲೆಏಳುತ್ತಿರುತ್ತದೆ. ಸೂರ್ಯ ಉರಿಯುತ್ತಿರುವ ಜಲಜನಕ ಮತ್ತು ಹೀಲಿಯಂ; ಇದರೊಡನೆ ಕ್ಯಾಲಿಸಿಯಂ ಮತ್ತು ಮ್ಯಾಗ್ನಿಸಿಯಂ ಇವುಗಳ ಆವಿಯೂ ಸೇರಿವೆ. ಸೂರ್ಯನ ದೇಹದೊಳಗಿನಿಂದ ಬರುವ ಕಣ್ಣನ್ನು ಕೋರೈಸುವ ಬೆಳಕು ಅದನ್ನು ಕಣ್ಣಿಗೆ ಕಾಣದಂತೆ ಮಾಡುತ್ತದೆ. ಆದರೂ ಪೂರ್ಣ ಸೂರ್ಯಗ್ರಹಣದ ಕಾಲದಲ್ಲಿ ದೂರದರ್ಶಕ ಯಂತ್ರದ ಮೂಲಕ ಅದನ್ನು ನೋಡಬಹುದು. ಆಗ ಚಂದ್ರನು ಕಣ್ಣನ್ನು ಕೋರೈಸುವ ಸೂರ್ಯನನ್ನುಮರೆಮಾಡುತ್ತಾನೆ; ಆಗ ನೋಟ ನೋಡು



ಸೂರ್ಯಗ್ರಹಣಕಾಲದಲ್ಲಿ ಚಂದ್ರ ನಮಗೆ ಸೂರ್ಯನನ್ನು ಮರೆಮಾಡುತ್ತದೆ. ಆಗ ದೂರದರ್ಶಕ ಯಂತ್ರದಿಂದ ಸೂರ್ಯನ ಹೊರಮೈಯಿಂದ ಏಳುವ ಜ್ವಾಲೆಯನ್ನು ನೋಡಬಹುದು

ವವನು ಸೂರ್ಯನ ಹೊರಮೈ ಮೇಲೆ ಎದ್ದು ಆಕಾಶವನ್ನು ನೆಕ್ಕುತ್ತಿರುವ ಅಪಾರವಾದಕೆಚ್ಚನೆಯ ಜ್ವಾಲೆಗಳನ್ನು ಕಾಣಬಹುದು.

## ಗ್ರಹಗಳು

ಒಂದು ಕಾಲಕ್ಕೆ ಸೂರ್ಯನಿಂದ ಕಳಚಿಕೊಂಡ ಹಲವು ತುಣುಕುಗಳು ಒಂದೊಂದೂ ಒಂದೊಂದು ದೂರದಲ್ಲಿ ಸೂರ್ಯನ ಸೆಳತಕ್ಕೆ ಒಳಗಾಗಿ ಗೊತ್ತಾದ ಒಂದು ಮಾರ್ಗದಲ್ಲಿ ಸೂರ್ಯನ ಸುತ್ತಲೂ ಸುತ್ತುತ್ತವೆ. ಭೂಮಿಯೂ ಅವುಗಳಲ್ಲಿ ಒಂದು. ಇದನ್ನು ಹಿಂದೆ ಹೇಳಿದೆ. ಇವುಗಳಿಗೆಲ್ಲಾ ಗ್ರಹಗಳೆಂದು ಹೆಸರು. ಸೂರ್ಯನಿಂದ ಅವುಗಳಿರುವ ದೂರವನ್ನು ಅನುಸರಿಸಿ ಕ್ರಮವಾಗಿ ಆ ಗ್ರಹಗಳ ಹೆಸರಿವು : ಬುಧ, ಶುಕ್ರ, ಭೂಮಿ, ಅಂಗಾರಕ, ಗುರು, ಶನಿ, ಯೂರೆನೆಸ್, ನೆಪ್ಚ್ಯೂನ್, ಪ್ಲೂಟೊ. ಈ ಗ್ರಹಗಳು ಈವರೆಗೆ ಗೊತ್ತಾಗಿರುವುವು. ಇನ್ನೂ ಹಲವು ಗ್ರಹಗಳು ಇದ್ದಾವು ಎಂಬ ಅನುಮಾನವಿದೆ. ಭೂಮಿಗೆ ಚಂದ್ರನಿರುವಂತೆ ಮಿಕ್ಕ ಗ್ರಹಗಳಲ್ಲಿ ಹಲವಕ್ಕೆ ಉಪಗ್ರಹಗಳಿವೆ. ಬುಧ, ಶುಕ್ರ, ಅಂಗಾರಕ, ಗುರು, ಶನಿ ಈ ಗ್ರಹಗಳನ್ನು ಬರಿಯ ಕಣ್ಣಿಂದ ಕಾಣಬಹುದು. ಮಿಕ್ಕವುಗಳನ್ನು ನೋಡಲು ದೂರದರ್ಶಕ ಯಂತ್ರದ ಸಹಾಯ ಬೇಕು. ಕಾರಣ, ಅವುಗಳಿರುವ ದೂರ ತುಂಬ.

ಗ್ರಹಗಳು ನಕ್ಷತ್ರಗಳಿಗಿಂತ ಭೂಮಿಗೆ ಹತ್ತಿರವಾಗಿರುವುದರಿಂದ ಅವುಗಳ ವಿಷಯದಲ್ಲಿ ಹೆಚ್ಚು ನಿಷ್ಕೃಷ್ಟವೂ ವಿಶದವೂ ಆದ ಜ್ಞಾನವನ್ನು ಪಡೆಯಬಹುದು. ಗ್ರಹಗಳು ಸೂರ್ಯನ ಸುತ್ತಲೂ ಒಂದೇ ದಿಕ್ಕಿಗೆ ಸುತ್ತುತ್ತವೆ. ಈ ಸಮಾನ ಲಕ್ಷಣವು ಗ್ರಹಗಳ ಹುಟ್ಟು ಒಂದೇಬಗೆ ಎಂಬುದನ್ನು ತೋರಿಸುತ್ತದೆ. ಅಂತೆಯೇ ಕಾಲವೂ ಒಂದೇ.

ಬುಧಗ್ರಹ ಸೂರ್ಯನಿಗೆ ಅತ್ಯಂತ ಸಮೀಪದಲ್ಲಿರುವುದು. ಇದು ಸೂರ್ಯನಿಗೆ ೩,೫೯,೭೦,೦೦೦ ಮೈಲಿ ದೂರದಲ್ಲಿದೆ. ಇದುಭೂಮಿಯ ಹಾಗೆ ಬುಗುರಿಯಂತೆ ತನ್ನನ್ನು ತಾನೇ ಸುತ್ತುವುದಿಲ್ಲ. ಒಂದು ಸಾರಿ ತನ್ನ ಅಕ್ಷದಮೇಲೆ ಸೂರ್ಯನನ್ನು ಸುತ್ತಲು ೮೮ ದಿನಗಳನ್ನು ತೆಗೆದುಕೊಳ್ಳುತ್ತದೆ. ಆದರಿಂದ ಅಲ್ಲಿ ಒಂದುದಿನ ಅಂದರೆ ನಮ್ಮ ೮೮ ದಿನಗಳು,




ಸೂರ್ಯವ್ಯೂಹ : ಗ್ರಹಗಳ ಗಾತ್ರವನ್ನೂ ದೂರವನ್ನೂ ಅನುಸರಿಸಿ ಅವುಗಳ ಪಥಗಳನ್ನು ತೋರಿಸಿದೆ

ಅದರಿಂದ ಅದರ ಒಂದು ಭಾಗ ಅತಿಯಾಗಿ ಕಾಯ್ದು ೬೦೦ ಸೆಂಟಿಗ್ರೇಡಿನಷ್ಟು ಶಾಖ ಹೊಂದುವುದು. ಹಾಗೆಯೇ ಸೂರ್ಯನಿಗೆ ಮರೆಯಾದ ಇನ್ನೊಂದುಭಾಗ ಅತಿ ತಂಪಾಗುವುದು. ಈ ಗ್ರಹಕ್ಕೆ ವಾಯುಮಂಡಲವೇ ಇಲ್ಲ. ಆದ್ದರಿಂದ ಇಲ್ಲಿ ಸಸ್ಯವಾಗಲಿ ಪ್ರಾಣಿಯಾಗಲಿ ಇಲ್ಲ.

**ಶುಕ್ರಗ್ರಹ** ಎರಡನೆಯದು ; ಸೂರ್ಯನಿಗೆ ೪,೩೩,೪೭,೦೦೦ ಮೈಲಿ ದೂರದಲ್ಲಿದೆ. ಇದು ಸ್ವಲ್ಪ ಹೆಚ್ಚು ಕಡಿಮೆ ಭೂಮಿಯಷ್ಟೇ ಗಾತ್ರದ್ದು. ಈ ಗ್ರಹದ ಸುತ್ತಲೂ ವಾಯುಮಂಡಲವಿರುವಂತಿದೆ. ನೋಡಗಟ್ಟಿ ಮಳೆಯು ಬೀಳುತ್ತಿರಬಹುದು.

ಅನಂತರ ನಮ್ಮ **ಭೂಮಿ** ಬರುತ್ತದೆ. ಇದು ಸೂರ್ಯನಿಗೆ ೯,೩೦,೦೦,೦೦೦ ಮೈಲಿ ದೂರದಲ್ಲಿದೆ. ಇದರ ವ್ಯಾಸ ೮೦೦೦ ಮೈಲಿ; ಪರಿಧಿ ೨೫೦೦೦ ಮೈಲಿ. ಅದರ ಕಥೆಯೇ ನಾವೀಗ ತಿಳಿಯಬೇಕಾಗಿರುವುದು.

ಇದಾದಮೇಲೆ **ಅಂಗಾರಕ** ಗ್ರಹ. ೧೬,೦೦,೦೦,೦೦೦ ಮೈಲಿ ದೂರದಲ್ಲಿದೆ. ಇದು ಭೂಮಿಗಿಂತಲೂ ಚಿಕ್ಕದು. ಇದರ ವ್ಯಾಸ ೪೨೧೫ ಮೈಲಿಗಳು. ತನ್ನಲ್ಲಿ ತಾನೆ ಸುಮಾರು ಇಪ್ಪತ್ತುನಾಲ್ಕುವರೆ ಗಂಟೆಯಲ್ಲಿ ತಿರುಗುತ್ತ ಸೂರ್ಯನನ್ನು ಬಳಸುತ್ತದೆ. ಇಲ್ಲಿ ಋತುಗಳ ವ್ಯತ್ಯಾಸಕ್ಕೆ ಆಧಾರವಿದೆ. ಈ ಗ್ರಹದ ಮೇಲ್ಮೈ ಕೆಂಪಗಿರುವುದರಿಂದ ಕೆಂಪಾಗಿ ಹೊಳೆಯುತ್ತದೆ. ಭೂಮಿಯಮೇಲಿರುವಂತೆಯೇ ಇಲ್ಲೂಮನುಷ್ಯರಂತವರು ವಾಸಿಸುವರೆಂದೂ, ಅಲ್ಲಿ ಕೆರೆ, ಕಟ್ಟೆ, ನಾಲೆಗಳಿವೆಯೆಂದೂ ಒಂದು ಕಾಲದಲ್ಲಿ ನಂಬಿಕೆ ಹುಟ್ಟಿತ್ತು. ಆದರೆ ಅದಕ್ಕೆ ಸಾಕಷ್ಟು ಆಧಾರ ದೊರೆತಿಲ್ಲ. ಆದರೂ ಇಲ್ಲಿ ಸಸ್ಯವರ್ಗವಿರಬೇಕೆಂದು ನಂಬಲಾಗಿದೆ. ಈ ಗ್ರಹಕ್ಕೆ ಎರಡು ಉಪಗ್ರಹಗಳಿವೆ.

ಆಮೇಲೆ ಬರುವುದು **ಬೃಹಸ್ಪತಿ** ಅಥವಾ **ಗುರು.** ಈ ಗ್ರಹ ತುಂಬ ದೊಡ್ಡದು. ಇದರ ವ್ಯಾಸ ೯೦,೦೦೦ ಮೈಲಿಗಳು. ಇದು ೪೮,೦೦,೦೦,೦೦೦ ಮೈಲಿ ದೂರದಲ್ಲಿದೆ.



ಗುರುವಿನ ಅನಂತರ ಬರುವ ಗ್ರಹ **ಶನಿ**. ಇದು ಗುರು ಗ್ರಹಕ್ಕಿಂತ ಕೊಂಚ ಚಿಕ್ಕದು. ವ್ಯಾಸ ೭೪೦೦೦ ಮೈಲಿಗಳು. ಸೂರ್ಯನಿಗೆ ೮೮.೬೦,೦೦,೦೦೦ ಮೈಲಿ ದೂರದಲ್ಲಿದೆ. ಇದಕ್ಕೆ ವಿಚಿತ್ರತರವಾದ ಉಪಗ್ರಹಗಳಿವೆ. ಆ ಉಪಗ್ರಹಗಳು ಈಗ್ರಹವನ್ನು ಬಳೆಯಂತೆ ಸುತ್ತುತ್ತಿವೆ.

ಇದಾದಮೇಲೆ ಯೂರೆನಸ್, ನೆಪ್ಚ್ಯೂನ್, ಪ್ಲೂಟೋ ಗ್ರಹಗಳಿವೆ. ಯೂರೆನಸ್ಸಿಗೆ ನಾಲ್ಕು ಉಪಗ್ರಹಗಳು ಕಂಡುಬಂದಿವೆ. ಈಗ ಸದ್ಯಕ್ಕೆ ಇಷ್ಟೇ ಗ್ರಹಗಳು ಗೊತ್ತಾಗಿರುವುದು.

ಹೀಗೆ ಸೂರ್ಯನ ಸುತ್ತಲೂ ಗ್ರಹಗಳು, ಆ ಗ್ರಹಗಳ ಸುತ್ತಲೂ ಉಪಗ್ರಹಗಳಿವೆ. ಇಷ್ಟೇ ಅಲ್ಲ, ಇನ್ನೊಂದುಬಗೆಯ ವಸ್ತುಗಳಿವೆ; ಅವು ಧೂಮಕೇತುಗಳು. ಇವೂ ಸೂರ್ಯನ ಸುತ್ತಲು ಸುತ್ತುತ್ತಿರುತ್ತವೆ. ಆದರೆ ಇವುಗಳು ನಮಗೆ ಎಷ್ಟೋ ವರುಷಕ್ಕೊಮ್ಮೆ ಕಾಣಿಸಿಕೊಳ್ಳುತ್ತವೆ. ಇನ್ನು ಉಲ್ಕಾಪಾತದ ವಿಷಯದಲ್ಲಿ ಒಂದೆರಡುಮಾತು. ರಾತ್ರಿಹೊತ್ತು ನಾವು ಆಕಾಶದಕಡೆ ನೋಡುತಿದ್ದರೆ ಒಮ್ಮೊಮ್ಮೆ ಒಂದು ಚುಕ್ಕಿ ಭೂಮಿಗೆ ಬಿದ್ದಂತೆ ಕಾಣುತ್ತದೆ. ನಕ್ಷತ್ರಗಳೆಂದರೇನು ಎಂಬುದನ್ನು ಈಗಾಗಲೇ ತಿಳಿದಿರುವ ನಾವು ಅವು ನಕ್ಷತ್ರಗಳಲ್ಲ ಎಂಬುದನ್ನು ಬಲ್ಲೆವು. ಹಾಗಾದರೆ ಅವುಗಳೇನು? ಭೂಮಿಗೆ ಬಲುದೂರದ ಅಂತರಿಕ್ಷದಲ್ಲಿ ಬಂಡೆ ರೂಪದ ಹಲವು ಸಣ್ಣಪುಟ್ಟ ವಸ್ತುಗಳು ತೇಲುತ್ತಿರುತ್ತವೆ. ಹೀಗಿರುವಾಗ ಒಮ್ಮೊಮ್ಮೆ ಅವು ಭೂಮಿಗೆ ಹತ್ತಿರ ಬಂದು ಅದರ ಆಕರ್ಷಣೆಗೆ ಸಿಕ್ಕುತ್ತವೆ. ಆಗ ಭರದಿಂದ ಭೂಮಿಗೆ ಬೀಳುತ್ತವೆ. ಆ ಭರದಲ್ಲಿ ಭೂಮಿಯ ವಾತಾವರಣಕ್ಕೆ ಸಿಕ್ಕಿ ಬೆಂಕಿಯಾಗಿ ಭಸ್ಮವಾಗುತ್ತವೆ. ಅವೇ ಉಲ್ಕಾಪಾತಗಳು.

ಇವುಗಳಲ್ಲದೆ ಅನೇಕ ಸಣ್ಣ ಗ್ರಹಗಳ ಗುಂಪೊಂದು **ಅಂಗಾರಕ** ಮತ್ತು **ಗುರು** ಗ್ರಹಗಳ ಮಧ್ಯೆ ಇದೆ.



2

ಅಂತೂ ಈಗ ಗೊತ್ತಾಗಿರುವಂತೆ ಭೂಮಿಯ ಮೇಲಿರುವಂತೆ ಮನುಷ್ಯ, ಪ್ರಾಣಿಗಳು ಇನ್ನಾವ ಗ್ರಹದಮೇಲೂ ಇದ್ದಂತಿಲ್ಲ.

ಸೌರವ್ಯೂಹದಲ್ಲಿ ಇದುವರೆಗೆ ಕಾಣಿಸಿಕೊಂಡಿರುವ ಗ್ರಹ, ಉಪ ಗ್ರಹಗಳ ವಿಷಯದಲ್ಲಿ ಇಷ್ಟೆಲ್ಲ ಹೇಳಿಯಾಯಿತು. ಸೌರವ್ಯೂಹದ ಇನ್ನೂ ಸ್ವಾರಸ್ಯವಾದ ಸಂಗತಿ ತಿಳಿಯಬೇಕಾಗಿದ್ದರೆ ಆ ವಿಷಯದ ದೊಡ್ಡ ಗ್ರಂಥಗಳನ್ನು ಓದಬೇಕು.

ಹೀಗೆ ಈ ವ್ಯೂಹಕ್ಕೆ ಕೇಂದ್ರಶಕ್ತಿಯಾಗಿರುವ ಸೂರ್ಯ, ಸೂರ್ಯನ ಆಕರ್ಷಣಶಕ್ತಿಗೆ ಒಳಗಾಗಿ ಅದರ ಸುತ್ತಲೂ ತಿರುಗುವ ಗ್ರಹಗಳು, ಈ ಗ್ರಹಗಳ ಆಕರ್ಷಣಶಕ್ತಿಗೆ ಒಳಗಾಗಿ ಅವುಗಳ ಸುತ್ತಲೂ ಸುತ್ತುವ ಉಪ ಗ್ರಹಗಳು ಸೇರಿ ಒಂದು ಸೌರವ್ಯೂಹ. ಇಂತಹ ಸೌರವ್ಯೂಹಗಳು ಅದೆಷ್ಟೋ ಬ್ರಹ್ಮಾಂಡದಲ್ಲಿ!

### ಬ್ರಹ್ಮಾಂಡ

ನಮಗೆ ಕಾಣುವ ಆಕಾಶಕ್ಕೆ ಕೊನೆಮೊದಲಿಲ್ಲ. ಈ ಅನಂತ ಆಕಾಶಕ್ಕೆ ಬ್ರಹ್ಮಾಂಡವೆನ್ನುವರು. ಈ ಬ್ರಹ್ಮಾಂಡದ ವಿಷಯ ಮನೋರಂಜಕವಾದುದು.

ರಾತ್ರಿವೇಳೆ ಆಕಾಶದ ಕಡೆಗೆ ತಿರುಗಿದರೆ ಅಸಂಖ್ಯ ನಕ್ಷತ್ರಗಳನ್ನು ನೋಡುವೆವು. ನಾವು ನೋಡುವ ನಕ್ಷತ್ರಗಳು ಸಾಮಾನ್ಯವಾಗಿ ಬೆಳ್ಳಗೆ ಕಾಣುತ್ತವೆ. ಅವುಗಳನ್ನು ಬಹಳ ಪ್ರಭಾವಶಾಲಿಯಾದ ದೂರ ದರ್ಶಕ ಯಂತ್ರದ ಮೂಲಕ ಪರೀಕ್ಷೆ ಮಾಡಿದರೆ ಒಂದು ಅದ್ಭುತ ಕಾಣುತ್ತದೆ. ಬಿಳಿಯ ನಕ್ಷತ್ರಗಳನ್ನು ನೋಡುವುದರ ಬದಲು, ಆಕಾಶ ನಾವು ಊಹಿಸಬಹುದಾದ ಎಲ್ಲ ಬಣ್ಣಗಳ ನಕ್ಷತ್ರಗಳಿಂದ ತುಂಬಿದೆಯೆಂಬುದನ್ನು ಕಾಣಬಹುದು. ಅಲ್ಲಿ ಹಸರು ಹಾಗೂ ಕೆಂಪು ನಕ್ಷತ್ರಗಳು, ಕಂದುಬಣ್ಣದ ಮತ್ತು ನೀಲಿಯ ನಕ್ಷತ್ರಗಳು, ಕಿತ್ತಲೆಹಣ್ಣಿನ ಬಣ್ಣದ ನಕ್ಷತ್ರಗಳು, ಕಣ್ಣನ್ನು ಕೋರೈಸುವಷ್ಟು ನೀಲಿ ಬಣ್ಣದಿಂದ ಕೂಡಿರುವ ನಕ್ಷತ್ರಗಳು ಹೀಗೆ ನಾವು ನೋಡಬಹುದು.



ಗ್ರಹ ನಕ್ಷತ್ರಗಳ ಸ್ಥಿತಿಗತಿಗಳನ್ನು ಕಂಡುಹಿಡಿಯಲು ಅನುಕೂಲವಾಗಿರುವ ದೊಡ್ಡ ದುರ್ಬೀನುಗಳಲ್ಲಿ ಇದು ಒಂದು. ಇದರ ತಳದಲ್ಲಿರುವ ಭೂತಕನ್ನಡಿಯ ವ್ಯಾಸ ೧೦೦ ಅಂಗುಲವಿದೆ. ಇದುಅಮೇರಿಕಾ ದಲ್ಲಿ ಕ್ಯಾಲಿಫೋರ್ನಿಯ ನಗರದ ಪರಿಶೋಧನಾಯದಲ್ಲಿದೆ.

## ಬಣ್ಣಕ್ಕೆ ಕಾರಣ

ನಕ್ಷತ್ರಗಳು ಹಲವು ಬಣ್ಣದವುಗಳಾಗಿರುವುದಕ್ಕೆ ಕಾರಣವೇನು? ಯಾರಿಗೂ ನಿಖರವಾಗಿ ಏನೆಂಬುದು ತಿಳಿದಿಲ್ಲ. ಆದರೂ ಅನೇಕ ದೃಷ್ಟಾಂತ ಗಳಿಂದ ನಕ್ಷತ್ರದ ಬಣ್ಣಕ್ಕೂ ಅದರ ವಯಸ್ಸಿಗೂ ಸಂಬಂಧವಿರಬಹು ದೆಂದು ತಿಳಿಯುತ್ತದೆ. ನೀಹಾರಿಕೆಯಿಂದ ಆಗತಾನೆಹೊರಬಿದ್ದ ಸೂರ್ಯ

ಬಹುಶಃ ಕೆಂಪಗಿರಬಹುದು. ತುಲನಾತ್ಮಕ ದೃಷ್ಟಿಯಿಂದ ಹೇಳಬಹುದಾದರೆ ಅದು ಸ್ವಲ್ಪಮಾತ್ರ ಶಾಖದಿಂದ ಕೂಡಿರುತ್ತದೆ. ಹೀಗೆ ಅದು ಅಸಂಖ್ಯಾತ ಶತಮಾನಗಳಕಾಲ ಬೆಳಗುತ್ತದೆ. ಅಷ್ಟುಕಾಲವೂ ಅದರಲ್ಲಿ ಸೇರಿಕೊಂಡಿರುವ ಪರಮಾಣುಗಳು ಪರಸ್ಪರ ಆಕರ್ಷಣೆಯಿಂದ ಒಂದೇ ಕಡೆಗೆ ದಟ್ಟವಾಗಿ ಸೇರುತ್ತಿರುತ್ತವೆ. ಅದರಿಂದ ಹೊಸ ಸೂರ್ಯ ನಿಧಾನವಾಗಿ ಸಂಕೋಚ ಹೊಂದುತ್ತದೆ. ಸಂಕೋಚ ಹೊಂದಿದ ಹಾಗೆಲ್ಲ ಅದರ ಬಿಸಿ ಏರುತ್ತಾ ಹೋಗುತ್ತದೆ. ಕೆಂಪು ಸೂರ್ಯನಿಂದ ಅದು ಕಿತ್ತಲೆ ಬಣ್ಣದ ಸೂರ್ಯನೂ ಕೊನೆಗೆ ಬೇಕಾದಷ್ಟು ಶಾಖವನ್ನು ಬೀರುತ್ತ ಕಣ್ಣನ್ನು ಕೋರೈಸುವ ನೀಲಿಯ ಸೂರ್ಯನೂ ಆಗಿ ಸಂಘಟಿತವಾಗುತ್ತದೆ. ಆದರೆ ಅಲ್ಲಿಂದಾಚೆಗೆ ಅದರ ಶಾಖ ಹೆಚ್ಚುವುದಿಲ್ಲ. ಇದಕ್ಕೆ ಬದಲು ಸೂರ್ಯ ಕ್ರಮವಾಗಿ ತಣ್ಣಗಾಗುತ್ತಾ ಹೋಗುತ್ತದೆ. ನೀಲಿಯ ಸೂರ್ಯನಿಂದ ಅದು ಕಿತ್ತಲೆಯಬಣ್ಣದ ಸೂರ್ಯನಾಗುತ್ತದೆ. ಕ್ರಮೇಣ ಅದು ಮತ್ತೆ ಕೆಂಪು ಸೂರ್ಯನಾಗುತ್ತ ಮುದಿಯಾಗುತ್ತದೆ. ಆದರೆ ಈಗ ಅದು ಹುಟ್ಟಿದಾಗ ಇದ್ದುದಕ್ಕಿಂತ ಊಹಿಸಲಾರದಷ್ಟು ಸಣ್ಣಗೂ, ಹೆಚ್ಚು ಘನೀಭೂತವೂ ಆಗಿರುತ್ತದೆ. ಇಲ್ಲಿಂದ ಮುಂದೆ ಅದರಲ್ಲಿ ವಿಶ್ವಕಿರಣಶಕ್ತಿ ಇರುವುದಿಲ್ಲ. ಹೀಗೆಯೇ ನಿಧಾನವಾಗಿ ಆರಿ ಸೂರ್ಯ ತಣ್ಣಗಾಗುತ್ತದೆ. ಆಮೇಲೆ ಕಾಲಕ್ರಮೇಣ ಅದೇನಾಗುವುದೋ! ಮತ್ತೆ ಅದು ಯಾವುದರಿಂದ ನಿರ್ಮಾಣವಾಯಿತೋ ಆ ಪರಮಾಣುವಾಗಿ ಒಡೆದು ಧೂಳಾಗಿ ಆಕಾಶವನ್ನು ತುಂಬಿ ಸೂರ್ಯನ ಪುನರ್ಜನ್ಮಕ್ಕೆ ಹದಗೊಳ್ಳುವುದೋ ಏನೊ!

## ಗ್ರಹಗಳು - ನಕ್ಷತ್ರಗಳು

ವಿಶ್ವದಲ್ಲಿ ನಾವು ತಿಳಿದಿರುವುದು ಕೇವಲ ಸ್ವಲ್ಪಭಾಗವನ್ನು ಮಾತ್ರ. ನಾವು ಲೆಕ್ಕಾಚಾರಮಾಡಿರುವ ಅಥವಾ ಊಹಿಸಿರುವ ಸ್ಥಳಕ್ಕಿಂತ ಬಹಳ ದೂರದಲ್ಲಿ ಇನ್ನೂ ಅದ್ಭುತವಾದ ಆಶ್ಚರ್ಯಕರವಾದ ಪ್ರಪಂಚಗಳು ಇರಬಹುದು. ಜ್ಯೋತಿಶ್ಶಾಸ್ತ್ರಜ್ಞರು ಸಂತತ ಆಕಾಶದ ಕಡೆಗೆ ನೋಡುತ್ತಿರು

ತ್ತಾರೆ. ಅವರು ಇಲ್ಲಿಂದ ಮುಂದೆ ಇನ್ನುಏನನ್ನು ಕಂಡುಹಿಡಿಯು ತಿದ್ದಾರೋ ಹೇಳುವುದು ಹೇಗೆ?

ಆಕಾಶದಲ್ಲಿ ಕಾಣುವ ಚುಕ್ಕಿಗಳೆಲ್ಲ ಸೂರ್ಯರಲ್ಲ. ಅವುಗಳಲ್ಲಿ ಎರಡು ಬಗೆ. ಹಿಂದೆ ಹೇಳಿಲ್ಲವೆ! ಬುಧ, ಶುಕ್ರ, ಭೂಮಿ, ಅಂಗಾರಕ, ಗುರು ಮೊದಲಾದ ಗ್ರಹಗಳ ವಿಷಯ. ಹೀಗೆ ಕೆಲವು ಚುಕ್ಕಿಗಳು ಗ್ರಹಗಳು, ಕೆಲವು ಉಪಗ್ರಹಗಳು, ಮಿಕ್ಕವು ನಕ್ಷತ್ರಗಳು. ಆದರೆ ನಕ್ಷತ್ರಗಳಿಗೂ, ಗ್ರಹಗಳಿಗೂ ಭೇದ ಕಂಡುಹಿಡಿಯಲು ಒಂದು ಗುರುತಿದೆ. ನಕ್ಷತ್ರಗಳು ಮಿಣುಗುತ್ತವೆ; ಗ್ರಹಗಳು ಮಿಣುಗುವುದಿಲ್ಲ. ಇದಕ್ಕೆ ಕಾರಣವುಂಟು. ನಕ್ಷತ್ರಗಳು ಸೂರ್ಯರಾಗಿದ್ದು ಉರಿಯುತ್ತಿರುವುದರಿಂದ ಸಹಜವಾಗಿಯೂ ಅವಕ್ಕೆ ಸ್ವಯಂಪ್ರಕಾಶವಿದೆ. ಭೂಮಿಯಂತೆಯೇ ಮಿಕ್ಕ ಗ್ರಹಗಳಿಗೂ ಸ್ವಯಂಪ್ರಕಾಶವಿಲ್ಲ. ಸೂರ್ಯರ ಪ್ರಕಾಶ ಗ್ರಹಗಳ ಮೇಲೆ ಬಿದ್ದು ಅವು ಗಳು ಹೊಳೆಯುವಂತೆ ಕಾಣುತ್ತವೆ. ನಾವು ಚಂದ್ರನಮೇಲೆ ನಿಂತು ನಮ್ಮ ಭೂಗ್ರಹವನ್ನು ನೋಡಿದರೆ ಅದು ಮಾಸಿದ ನೀಲಿಬಣ್ಣದ ಗ್ರಹ ದಂತೆ ಕಾಣುವುದಂತೆ!

## ನಕ್ಷತ್ರಗಳಿಗಿರುವ ಗಾತ್ರ ಮತ್ತು ದೂರ

ಬ್ರಹ್ಮಾಂಡದಲ್ಲಿ ಅಸ್ತವ್ಯಸ್ತವಾದ ವಿವಿಧ ನಕ್ಷತ್ರಗಳಿದ್ದರೂ ಸಾಧಾ ರಣವಾಗಿ ಎಲ್ಲವೂ ಒಂದೇಸಮನಾಗಿ ಕಾಣುತ್ತವೆ. ನಮ್ಮ ದೃಗ್ಗೋಚರ ವಾದ ನಕ್ಷತ್ರಗಳೆಲ್ಲವೂ ಬಹಳ ಸಮೀಪದಲ್ಲೇ ಇವೆಯೆಂದೂ ತೋರುತ್ತದೆ. ಅಷ್ಟೇಅಲ್ಲ, ಅವು ಒಂದಕ್ಕೊಂದು ತುಂಬ ಹತ್ತಿರದಲ್ಲಿರುವಂತೆ ಕಾಣು ತ್ತವೆ. ಆದರೆ ನಿಜವಾಗಿ ಅವು ಒಂದೇಸಮನಾಗಿ ಇಲ್ಲ. ಒಂದಕ್ಕೆ ಇನ್ನೊಂದು ನೂರರಷ್ಟು ದೊಡ್ಡದಾಗಿರಬಹುದು. ಅಥವಾ ಒಂದು ಇನ್ನೊಂದಕ್ಕೆನೂರರಷ್ಟು ಕಡಿಮೆ ಗಾತ್ರದ್ದಾಗಿಯೂ ಇರಬಹುದು.

ನಕ್ಷತ್ರಗಳಲ್ಲಿ ಒಂದಕ್ಕೆ ಇನ್ನೊಂದು ಇರುವ ದೂರ ಅದೆಷ್ಟೋ ಕೋಟಿ ಯೋಜನಗಳು. ಈ ದೂರವನ್ನು ಅಂಕಿ ಇಟ್ಟು ತೋರಿಸುವುದು ಕಷ್ಟ. ಕೋಟ್ಯಂತರ ಯೋಜನಗಳ ದೂರದಿಂದ ನಾವು ಆ ನಕ್ಷತ್ರಗಳನ್ನು ನೋಡುತ್ತಿರುವುದರಿಂದ ಹಾಗೆ ಅವು ಹತ್ತಿರ ಹತ್ತಿರ ಕಾಣಿಸುತ್ತವೆ. ನಮಗೆ ಬಹಳ ದೂರದಲ್ಲಿ ನಿಂತಿರುವ ಒಬ್ಬನನ್ನು ನೋಡುತ್ತೇವೆ ಎಂದುಕೊಳ್ಳೋಣ. ಅವನ ಹಿಂದೆ ಅವನಿಗೆ ಬಲು ದೂರದಲ್ಲಿ ನಮಗೆ ಕಾಣುವಂತೆ ಒಬ್ಬ ಮನುಷ್ಯ ನಿಂತಿದ್ದರೆ ಅವರಿಬ್ಬರೂ ಅಕ್ಕಪಕ್ಕದಲ್ಲಿರುವಂತೆ ಕಾಣುತ್ತದೆ. ಅದು ನಮ್ಮ ಕಣ್ಣಿನ ನೋಟದ ತಪ್ಪೇ ಹೊರತು ಅವರಿಬ್ಬರಿಗೆ ಅಂತರವಿಲ್ಲ ಎಂದಲ್ಲ. ಹಾಗೆಯೇ ನಕ್ಷತ್ರಗಳಿರುವ ಅಂತರದಲ್ಲೂ.

## ಜ್ಯೋತಿರ್ವರ್ಷ

ಸಂಖ್ಯೆಯಿಂದ ಗುರುತಿಸಲು ಆಗದ ದೂರ ಅಳೆಯಲು ಬೆಳಕುಕಾಲ ಎಂಬ ಅಳತೆಯಿದೆ. ಬೆಳಕು ಒಂದು ಕ್ಷಣಕ್ಕೆ ೧,೮೬,೩೨೬ ಮೈಲಿ ಹೋಗುವುದು. ಇದಕ್ಕೆ ಬೆಳಕುಕಾಲವೆನ್ನುವರು. ಈ ರೀತಿಯಲ್ಲಿ ಬೆಳಕು ಒಂದು ವರ್ಷದಲ್ಲಿ ಎಷ್ಟುದೂರ ಹಾಯುವುದೋ ಅಷ್ಟಕ್ಕೆ ಜ್ಯೋತಿರ್ವರ್ಷವೆನ್ನುವರು. ನಾವು ಬ್ರಹ್ಮಕಾಲವೆನ್ನುವುದಿಲ್ಲವೇ ಹಾಗೆ. ಹಲವು ನಕ್ಷತ್ರಗಳಿಂದ ಬೆಳಕು ಹೊರಟು, ಆ ನಕ್ಷತ್ರಗಳು ಉದ್ಭವವಾದಾಗ, ಈ ಪ್ರಮಾಣದಲ್ಲಿ ಭೂಮಿಗೆ ಮುಟ್ಟಬೇಕಾಗಿದ್ದರೆ ಐದು ವರ್ಷ, ಹತ್ತು ವರ್ಷ, ನೂರು ವರ್ಷ ಇನ್ನೂ ಹೆಚ್ಚುಕಾಲ ಆಗಿದೆಯಂತೆ. ಇನ್ನೂ ಆಶ್ಚರ್ಯವೆಂದರೆ, ಕೆಲವು ನಕ್ಷತ್ರಗಳ ಬೆಳಕು ಶತಮಾನಗಳ ಹಿಂದೆಯೇ ಹೊರಟಿದ್ದರೂ ಇನ್ನೂ ಭೂಮಿಗೆ ತಲಪಿಲ್ಲವಂತೆ. ಅಂದರೆ ಆ ನಕ್ಷತ್ರಗಳು ನಮಗೆ ಎಷ್ಟು ದೂರದಲ್ಲಿರಬಹುದು! ಹೀಗೆ ಇದುವರೆಗೆ ಉತ್ತಮ ದೂರದರ್ಶಕಯಂತ್ರಗಳ ಶಕ್ತಿಯಿಂದ ನೋಡಿ ೧೫,೦೦,೦೦,೦೦೦ ನಕ್ಷತ್ರಗಳು ಕಾಣಿಸಿಕೊಂಡಿವೆ ಎಂದು ಶಾಸ್ತ್ರಜ್ಞರು ಹೇಳುತ್ತಾರೆ.

ಭೂಮಿಗೆ ಹತ್ತಿರವಿರುವ ನಕ್ಷತ್ರವೆಂದರೆ ನಮ್ಮ ಸೂರ್ಯ. ಅದನ್ನು ಬಿಟ್ಟರೆ ಹತ್ತಿರದ ನಕ್ಷತ್ರದ ದೂರ ೪ ಜ್ಯೋತಿರ್ವರ್ಷ. ಭೂಮಿಗೂ ಸೂರ್ಯನಿಗೂ ಇರುವ ದೂರ ೯,೩೦,೦೦,೦೦೦ ಮೈಲಿಗಳು ಮಾತ್ರ. ಸೂರ್ಯನಿಂದ ಭೂಮಿಗೆ ಬೆಳಕು ೮ ನಿಮಿಷದಲ್ಲಿ ಮುಟ್ಟುವುದು. ಅಂದರೆ ಗಂಟೆಗೆ ನೂರುಮೈಲಿ ದೂರ ಹಾರಬಲ್ಲ ವಿಮಾನದಲ್ಲಿ ಕುಳಿತು ಯಾವಕಡೆಯೂ ರಾತ್ರಿ ಹಗಲು ಕ್ಷಣವೂ ನಿಲ್ಲದೆ ಹಾರಿದರೆ ಸುಮಾರು ೧೧೨ ವರ್ಷಗಳಲ್ಲಿ ಸೂರ್ಯನನ್ನು ತಲಪಬಹುದು. ಹಾಗೆ ಮಾಡಲಾಗುವುದಿಲ್ಲ. ಸುಮ್ಮನೆ ಒಂದು ಲೆಕ್ಕಾಚಾರಕ್ಕಾಗಿ ಊಹೆಯು ಮಾತಷ್ಟೆ.

ಹೀಗೆಜ್ಯೋತಿರ್ವರ್ಷಗಳ ದೂರದೂರಗಳಲ್ಲಿ ಅಸಂಖ್ಯ ಸೌರವ್ಯೂಹಗಳು ಅನಂತ ಬ್ರಹ್ಮಾಂಡದಲ್ಲಿವೆ. ಅಷ್ಟೇ ಅಲ್ಲ, ಇನ್ನೂ ಹೊಸಹೊಸದಾಗಿ ಸೌರವ್ಯೂಹಗಳು ಬ್ರಹ್ಮಾಂಡದ ಮೂಲೆ ಮೂಲೆ ಗಳಲ್ಲಿರುವ ನೀಹಾರಿಕೆಗಳಲ್ಲಿ ತಯಾರಾಗುತ್ತಿವೆ. ಆದರೆ ಅವುಗಳೊಂದೊಂದೂ ಇದ್ದಲ್ಲೇ ಇರುವಂತಿಲ್ಲ.

## ನಕ್ಷತ್ರಗಳ ಚಲನೆ

ನೀಲಿಬಣ್ಣದ ಆಕಾಶದಲ್ಲಿ ನಕ್ಷತ್ರಗಳು ಅಲುಗಾಡದೆ ನೇತುಬಿದ್ದಿವೆ. ಪ್ರಾಚೀನಕಾಲದ ನಮ್ಮ ಹಿರಿಯರು, ಗ್ರೀಕ್ ಅಥವಾ ರೋಮನ್ ಜನರು ನೋಡಿದಷ್ಟುರಮಟ್ಟಿಗೇ ನಾವೂ ಅವುಗಳನ್ನು ನೋಡುತ್ತೇವೆ. ಮೂರು ನಾಲ್ಕುಸಾವಿರವರ್ಷಗಳ ಹಿಂದೆ ಅವರು ರಾಶಿಗಳಾಗಿ ವಿಂಗಡಿಸಿದ ನಕ್ಷತ್ರಗಳು ಈಗಲೂಪರಸ್ಪರ ಹತ್ತಿರ ಹತ್ತಿರ ಅದೇ ಸ್ಥಾನಗಳಲ್ಲೇ ಇವೆ. ಆದರೂ ನಮಗೆ ಕಾಣುವಷ್ಟುರಮಟ್ಟಿಗೆ ಅವು ಅಲುಗಾಡದೆ ಇಲ್ಲ. ನಿಜವಾಗಿ ಆ ನಕ್ಷತ್ರಗಳು ಅದ್ಭುತವಾದ ವೇಗದಿಂದ ಆತುರಾತುರವಾಗಿ ಓಡುತ್ತಿವೆ. ಬ್ರಹ್ಮಾಂಡದಲ್ಲಿನ ಕೋಟಿ ಸೂರ್ಯರಲ್ಲಿ ಯಾವುದೂ ನಿಶ್ಚಲವಾಗಿಲ್ಲ. ಆಕಾಶ ಅಷ್ಟು ಅಪಾರವಾದುದು. ನಕ್ಷತ್ರಗಳಿಗೂ ನಮ್ಮ ಪ್ರಪಂಚಕ್ಕೂ ಮಧ್ಯೆ ಇರುವ ದೂರ ಅಷ್ಟು ಅಗಾಧವಾದುದು. ಹೀಗಾಗಿ ನಕ್ಷತ್ರಗಳು ಪೂರ್ತಿ

ನಿಶ್ಚಲವಾಗಿರುವಂತೆ ಕಾಣುತ್ತವೆ. ಹೀಗಿರುವ ಅವುಗಳ ಸ್ಥಾನಗಳಲ್ಲಿ ಕಿಂಚಿತು ಬದಲಾವಣೆಯನ್ನಾದರು ನೋಡಲು ಮನುಷ್ಯ ಸಾವಿರಾರು ವರ್ಷಗಳನ್ನು ಕಳೆಯಬೇಕು.

## ಆ ಚೈತನ್ಯ

ಹೀಗೆ ಗ್ರಹಗಳು ತಮ್ಮ ಸೂರ್ಯನ ಆಕರ್ಷಣೆಗೆ ಒಳಗಾಗಿ ಅದನ್ನು ಬಳಸುವಂತೆ ಸೂರ್ಯರೂ ಯಾವುದೋ ಒಂದು ಕೇಂದ್ರಶಕ್ತಿಯ ಆಕರ್ಷಣೆಗೆ ಒಳಗಾಗಿ ತಮ್ಮ ಗ್ರಹಗಳೊಡನೆ ಅದರ ಸುತ್ತ ಬಳಸುವವು. ಸೌರವ್ಯೂಹಗಳೆಲ್ಲ ಆದರ್ಶವಾದ ಒಂದು ರಾಜ್ಯದಲ್ಲಿರುವ ಸಂಸಾರಗಳಂತಿವೆ. ಒಂದರ ಹಾದಿಯಲ್ಲಿ ಒಂದು ಅಡ್ಡಬರದೆ ಒಂದನ್ನೊಂದು ಅನುಸರಿಸಿ ಚಲಿಸುತ್ತವೆ. ರಾಜ್ಯದ ಒಂದು ನಿಯಮಕ್ಕೆ ಒಳಗಾಗಿ ಸಂಸಾರಗಳು ಬಾಳುವಂತೆ ಈ ಸೌರವ್ಯೂಹಗಳು ಒಂದು ಕೇಂದ್ರಶಕ್ತಿಯ ನಿಯಮಕ್ಕೆ ಒಳಗಾಗಿ ಚಲಿಸುತ್ತವೆ. ರಾಜ್ಯದಲ್ಲಿ ರಾಜನಿದ್ದಂತೆ ಬ್ರಹ್ಮಾಂಡದಲ್ಲಿ ಆ ಕೇಂದ್ರಶಕ್ತಿ. ಅದು ಎಲ್ಲದರ ಸೂತ್ರಧಾರಿಯಾಗಿದೆ. ಬ್ರಹ್ಮಾಂಡಕ್ಕೆಲ್ಲಾ ಆ ಸರ್ವಶಕ್ತಿಯೇ ಆಧಾರ. ಈಶ್ವರನೆಂದೋ ದೇವರೆಂದೋ ನಾವು ಕರೆಯುವುದೇ ಆ ಚೈತನ್ಯ.

* ಯಾವುದನ್ನರಿತವರು ಮೋಕ್ಷವನ್ನು ಪಡೆವರೋ ಅಜ್ಞೇಯವೇನೆಂಬುದನ್ನು ನಿನಗೆ ಹೇಳುವೆನು. ಅದು ಅನಾದಿಯಾದ ಪರಬ್ರಹ್ಮವು; ಅದನ್ನು ಸತ್ ಎಂದೂ ಹೇಳಲಾಗುವುದಿಲ್ಲ; ಅಸತ್ತೆಂದೂ ಹೇಳಲಾಗುವುದಿಲ್ಲ. . ಎಲ್ಲಿನೋಡಿದರಲ್ಲಿ ಅದಕ್ಕೆ ಕೈಕಾಲು, ಕಣ್ಣು, ತಲೆ, ಬಾಯಿ, ಕಿವಿ ಇವೆ. ಎಲ್ಲಕಡೆಯೂ ವ್ಯಾಪ್ತವಾಗಿ ಅದು ಈ ಬ್ರಹ್ಮಾಂಡದಲ್ಲಿದೆ.

---

* ಜ್ಞೇಯಂ ಯತ್ ತತ್ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।
ಅನಾದಿಮತ್ ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥
ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಶ್ಶ್ರುತಿಮಲ್ಲೋಕೇ ಸರ್ವಮಾವೃತ್ಯತಿಷ್ಠತಿ ॥

–ಭಗವದ್ಗೀತೆ.


ಭೂಮಿ

ಭೂಮಿ ಸೂರ್ಯನ ಒಂದು ಚೂರುತಾನೆ. ಮೊದಲು ಅದೂಕೂಡ ಸೂರ್ಯನಂತೆಯೇ ಉರಿಯುತ್ತ ಅನಿಲ ಗೋಳವಾಗಿಯೇ ಇತ್ತು. ಒಂದು ಕಾಲಕ್ಕೆ ಸೂರ್ಯನ ಸುತ್ತಲೂ ಅತಿ ಶೀತಲವಾದ, ಗ್ರಹಿಸಲಾರದಷ್ಟು ಶೀತಲವಾದ ವಾತಾವರಣ ಉಂಟಾಯಿತು. ಈ ಶೀತಕ್ಕೆ ನಮ್ಮ ಚಿಕ್ಕಭೂಮಿ ಕ್ರಮೇಣ ತಣ್ಣಗಾಗುತ್ತ ಬಂತು. ಈ ಶೀತ ಸೂರ್ಯನಿಗೂ ತಾಕಿತು. ಆದರೆ ಭೂಮಿಗಿಂತಲೂ ಆದೆಷ್ಟೋಪಾಲು ದೊಡ್ಡದಾಗಿದ್ದು ತನ್ನ ಅಗ್ನಿ ಶಿಖೆಗೆ ಸಿಲುಕಿದುದನ್ನೆಲ್ಲ ಭಸ್ಮೀಭೂತ ಮಾಡುವಂತಿದ್ದ ಸೂರ್ಯನನ್ನು ಅದು ಬೇಗನೆ ತಣ್ಣಗೆ ಮಾಡಲಾಗಲಿಲ್ಲ. ಸೂರ್ಯನ ಶಾಖವೂ ಕ್ರಮೇಣ ಕಡಿಮೆಯಾಗುತ್ತಿದೆ. ಇನ್ನೂ ಸೂರ್ಯನಮೇಲ್ಮೈಶಾಖ 6000° ಸೆಂಟಿಗ್ರೇಡಿನಷ್ಟಿದೆ. ಯೋಜನಗಟ್ಟಲೆ ಆಕಾಶವನ್ನು ನೆಕ್ಕುತ್ತಿರುವ ಅದರ ಜ್ವಾಲೆಯು ತಣ್ಣಗಾಗಬೇಕಾಗಿದ್ದರೆ ಇನ್ನೂ ಕೋಟ್ಯಾಂತರ ಶತಮಾನಗಳು ಕಳೆಯಬೇಕಾಗಬಹುದು. ಅಷ್ಟರಲ್ಲಿ ನಮ್ಮ ಭೂಲೋಕ ಮತ್ತಿತರ ಲೋಕಗಳು ಏನೇನಾಗಿ ಹೋಗುವುವೋ ಯಾರಿಗೆ ಗೊತ್ತು !

ಇನ್ನು ಭೂಮಿಯಕಥೆ. ಉರಿಯುತ್ತಿರುವ ಗಾಳಿರೂಪದಲ್ಲಿದ್ದ ಭೂಮಿ ತಂಪಾಗುತ್ತ ಬಂತು ; ಹೊಗೆ ತುಂಬಿ ಕೆಂಪಗೆ ಕಾಯ್ದ ದ್ರವ ರೂಪಕ್ಕೆ ಬದಲಾಯಿಸಿತು.

ಮೊದಮೊದಲು ಭೂಮಿಯ ಸುತ್ತಲೂ ವಾತಾವಾರಣವು ಅನೇಕ ಪದರಗಳನ್ನು ಒಳಗೊಂಡಿತ್ತು. ಭೂತಳಕ್ಕೆ ಅತಿ ಸಮೀಪದ ಗಾಳಿಯಲ್ಲಿ ಉಪ್ಪು ಆವಿರೂಪದಲ್ಲಿ ತೇಲುತ್ತಿತ್ತು. ಆ ಪದರದ ಮೇಲೆ ಕರಿಯ ಹೊಗೆಯಂತೆ ಇಂಗಾಲಾಮ್ಲ ವಾಯು ತುಂಬಿತ್ತು. ಅದಕ್ಕೂ ಮೇಲೆ ಆಮ್ಲ ಜನಕ, ಆಮೇಲೆ ಸಾರಜನಕ ಅನಂತರ ಆವಿಯಾಗಿದ್ದ ನೀರು. ಹೀಗೆ ಭೂಮಿಯ ಸುತ್ತಲೂ ವಾತಾವರಣವು ಅನೇಕಪದರಗಳನ್ನು ಒಳಗೊಂಡಿತ್ತು.

ಭೂಗೋಲ ತಂಪಾಗುತ್ತ ಬಂದಂತೆ ರಾಸಾಯನಿಕ ವಸ್ತುಗಳು ಒಂದರೊಡನೊಂದು ಸಂಯೋಗಗೊಂಡು ಆಚೆ ಈಚೆ ನುಗ್ಗಿ ಮದ್ದಿನಂತೆ ಸಿಡಿದು ಮತ್ತೆ ಮತ್ತೆ ಜೆರೆತವು. ಮತ್ತೆ ಮತ್ತೆ ಸ್ಫೋಟನಗಳನ್ನುಂಟು ಮಾಡಿದವು. ಈ ಸಿಡಿತ ಬಡಿತಗಳಿಂದ ತುಂಬಿದ ಭೂಮಿ ಬೆಂಕಿಕಾರುತ್ತ ಘರ್ಜಿಸುತ್ತ ಸೂರ್ಯನ ಸುತ್ತಲೂ ಬಾದಾಮಿ ಆಕಾರದ ತನ್ನ ಪಥದಲ್ಲಿ ಬುಗುರಿಯಂತೆ ಸುತ್ತಿ ಸುತ್ತಿ ಓಡಹತ್ತಿತು.

ಕಾಲ ಜಾರಿತು; ಶತಮಾನಗಳು, ಯುಗಗಳು ಉರುಳಿದವು. ಭೂಮಿಯು ಮೇಲ್ಭಾಗದಿಂದ ಇನ್ನೂ ತಂಪಾಗ ತೊಡಗಿತು. ಭೂಮಿಯು ಹೆಚ್ಚು ತಂಪುಗೊಂಡಂತೆ ಅದರ ಮೇಲ್ಭಾಗ ಘನರೂಪವನ್ನು ಹೊಂದಿ ಗಟ್ಟಿಯಾಗುತ್ತಾ ಬಂತು. ಆದರೂ ರಾಸಾಯನಿಕ ಬದಲಾವಣೆಯಿಂದ ಒಳಗಡೆಯ ಶಾಖ ಆಗಾಗ್ಗೆ ಉಲ್ಬಣಿಸುತ್ತಲೇ ಇತ್ತು. ಅದು ಭೂಮಿಯ ಮೇಲೆ ಕಟ್ಟಿದ್ದ ಗಟ್ಟಿ ಪದರವನ್ನು ಅಲ್ಲಲ್ಲೇ ಒಡೆದು ನುಚ್ಚುನೂರುಮಾಡಿ ಹೊರಗೆ ನುಗ್ಗುತ್ತಿತ್ತು. ಬೆಣ್ಣೆಮುದ್ದೆಯನ್ನು ಬಿರುಸಿನಿಂದ ಊದಿ ಅಥವಾ ಬೆರಳಿನಿಂದ ಅದುಮಿ ಹಳ್ಳತಿಟ್ಟಾಗಿ ಮಾಡಬಹುದಲ್ಲವೇ ? ಅಂತೆಯೇ ಈ ಉಲ್ಬಣಾವಸ್ಥೆ ಮತ್ತು ವಾತಾವರಣದ ಒತ್ತಡ ಇನ್ನೂ ಶಾಖದಿಂದ ಮೃದುವಾಗಿದ್ದ ಭೂಮಿಯ ಮೇಲ್ಭಾಗದಲ್ಲಿ ಅಗಾಧವಾದ ಹಳ್ಳತಿಟ್ಟುಗಳನ್ನುಂಟು ಮಾಡಿದುವು. ಈ ಉಬ್ಬು ತಗ್ಗುಗಳೇ ಬೆಟ್ಟ ಪರ್ವತಗಳ ಎತ್ತರ, ಸಮುದ್ರ ಸಾಗರಗಳ ಆಳ. ಇನ್ನೂ ಕಾಲ ಕಳೆದಂತೆ ಭೂಮಿ ಹೆಚ್ಚು ತಂಪಾಯಿತು. ಆಗ ಸುಲಭವಾಗಿ ಒಡೆಯಲಾಗದಂತಹ ಕಲ್ಲು ಪದರವೊಂದು ಭೂಮಿಯ ಮೇಲ್ಭಾಗದಲ್ಲಿ ಕಟ್ಟಿಕೊಂಡಿತು. ಅನಂತರ ಶಾಖದ ಉಲ್ಬಣ ಮೊದಲಷ್ಟು ಹೆಚ್ಚಾಗಿರಲಿಲ್ಲ.

ಭೂಮಿ ಇನ್ನೂ ಇನ್ನೂ ತಂಪಾಗುತ್ತ ಬಂತು. ಅದರ ಸುತ್ತಲೂ ವಾತಾವರಣದ ಕಾವೂ ಕಡಿಮೆಯಾಯಿತು. ಅತಿ ಉಷ್ಣದಿಂದ ಆವಿರೂಪದಲ್ಲಿದ್ದ ಉಪ್ಪು ದ್ರವ, ಅನಂತರ ಘನರೂಪತಾಳಿ ಭೂಮಿಯ ಮೇಲ್ಭಾಗದಲ್ಲಿ ಅಡಿಗಟ್ಟಲೆ ಎತ್ತರವಾಗಿ ತುಂಬಿತು. ಸುತ್ತು ಮುತ್ತಲೂ ಇದ್ದ

ಜಲಜನಕ ಆಮ್ಲಜನಕಗಳು ಸೇರಿ ಆವಿಯನ್ನುಂಟುಮಾಡಿದವು. ಸ್ವಲ್ಪ ದಿನಗಳೊಳಗಾಗಿಯೇ ಆವಿಯು ತಣ್ಣಗಾಗಿ ಮೊದಲನೆ ಬಾರಿ ಮಳೆ ಬಿತ್ತು. ಮೊದಲನೆ ಮಳೆ ಬಿಸಿಬಿಸಿಯಾಗಿತ್ತು; ಮತ್ತು ಅದಕ್ಕಿಂತಲೂ ಬಿಸಿಯಾಗಿದ್ದ ನೆಲವನ್ನು ಮುಟ್ಟುವುದಕ್ಕೆ ಮೊದಲೇ ಅದು ಮತ್ತೆ ಆವಿಯ ರೂಪಹೊಂದಿತು. ಆದರೆ ಮಳೆ ಹೆಚ್ಚು ಹೆಚ್ಚಾಗಿ ಬಿದ್ದಂತೆಲ್ಲ ನೆಲ ಹೆಚ್ಚು ಹೆಚ್ಚು ತಂಪಾಗುತ್ತಾ ಬಂತು. ಅಗಾಧವಾಗಿ ಆವಿರೂಪದಲ್ಲಿ ಆಕಾಶದಲ್ಲಿ ತೇಲುತ್ತಿದ್ದ ನೀರು ಅತಿವೃಷ್ಟಿಯಾಗಿ ಧರೆಗಿಳಿಯಿತು. ಭೂಮಿಯ ಮೇಲೆ ಹರಡಿದ್ದ ಉಪ್ಪನ್ನೆಲ್ಲ ಕರಗಿಸಿಕೊಂಡು ತಗ್ಗಿಗೆ ಹರಿಯಿತು. ಆಗಾಗಲೇ ಉಂಟಾಗಿದ್ದ ಕಂದಕಗಳೆಲ್ಲ ನೀರುತುಂಬಿ ಸಾಗರ ಸರೋವರಗಳಾದವು. ಸಾಗರ ಸರೋವರಗಳಲ್ಲಿ ತುಂಬಿದ ಉಪ್ಪುನೀರು ಭೂಮಿಯ ಕಾವಿನಿಂದ ಕಾಯ್ದು ಮರಳುತಿತ್ತು.

ಇಷ್ಟಾದರೂ ಸುತ್ತಲೂ ಆವರಿಸಿದ್ದ ವಾಯುಮಂಡಲವೆಲ್ಲಾ ಹೊಗೆಯ ಮೋಡ ತುಂಬಿದಂತಿತ್ತು. ಸೂರ್ಯರಶ್ಮಿ ಭೂಮಿಯನ್ನು ಮುಟ್ಟುತ್ತಲೇ ಇರಲಿಲ್ಲ. ಭೂಮಿಯೆಲ್ಲ ಕತ್ತಲೆಮಯವಾಗಿತ್ತು. ಅದು ಹಗಲಾಗಲಿ ಇರುಳಾಗಲಿ ಇಲ್ಲದ ಪ್ರಪಂಚ. ಆಗ ಭೂಮಿಯಮೇಲೆ ವಲಯಗಳ ಭೇದವಿರಲಿಲ್ಲ; ಅಲ್ಲದೆ ಅದು ನಿರ್ಜೀವವಾದ ಪ್ರಪಂಚವಾಗಿತ್ತು. ಮರಳುತ್ತಿದ್ದ ಉಪ್ಪುನೀರಿನ ಸಾಗರಗಳ ಮತ್ತು ಬಂಜರಾದ ಪ್ರದೇಶಗಳ ನಿರ್ಜನತೆಯನ್ನು ಭೇದಿಸುವ ಯಾವ ಒಂದು ಸಸ್ಯವಾಗಲಿ ಕ್ರಿಮಿಯಾಗಲಿ ಇರಲಿಲ್ಲ. ಕೆಲವುವೇಳೆ ಮಾತ್ರ ಅಲ್ಲಲ್ಲೇ ಜ್ವಾಲಾಮುಖಿಗಳಿಂದಲೂ, ಸಿಡಿಲು ಮಿಂಚುಗಳಿಂದಲೂ ಬೆಳಕು, ಶಬ್ದ ಉಂಟಾಗುತಿತ್ತು ಅಷ್ಟೆ.

ಹೀಗೆ ಯುಗ ಯುಗಾಂತರಗಳು ಕಳೆದವು. ಭೂಮಿಯ ಮೇಲ್ಭಾಗ ಹೆಚ್ಚು ಹೆಚ್ಚು ಆಳಕ್ಕೆ ತಂಪಾಗಿ ಗಟ್ಟಿಯಾಗುತ್ತಾ ಬಂತು. ಸುತ್ತಲ ವಾತಾವರಣ ಕೊಂಚ ಕೊಂಚ ತಿಳಿಯಾಗುತ್ತಾ ಬಂತು. ಆಗ ಸೂರ್ಯನ ಬೆಳಕು ಭೂಮಂಡಲದಮೇಲೆ ಬಿತ್ತು. ಭೂಮಿಯು ಬುಗುರಿಯಂತೆ ಗಿರ್ರನೆ ತಿರುಗುತ್ತಿದ್ದುದರಿಂದ ಸೂರ್ಯನ ಎದುರುಬಂದ ಭೂಮಿಯ

ಭಾಗದಲ್ಲಿ ಸೂರ್ಯನ ಪ್ರಕಾಶ ಬಿದ್ದು ಬೆಳಗಿತು. ಸೂರ್ಯನಿಗೆ ಮರೆಯಾಗಿದ್ದ ಭಾಗದಲ್ಲಿ ಕತ್ತಲೆ ಕವಿಯಿತು. ಹೀಗೆ ಹಗಲು ಇರುಳುಗಳುಂಟಾದುವು. ಭೂಮಿಯ ಹಳ್ಳತಿಟ್ಟು ಆಕಾರ ಮತ್ತು ಸುತ್ತಾಟ ಇವನ್ನನುಸರಿಸಿ ವಾತಾವರಣದಲ್ಲಿ ಬದಲಾವಣೆ ಉಂಟಾಯಿತು; ಋತುಭೇದ ಕಾಣಿಸಿ ಕೊಂಡಿತು. ಸಮುದ್ರದಲ್ಲಿ ಪ್ರವಾಹ ಕಾಣಿಸಿಕೊಂಡವು. ಸೂರ್ಯನ ಶಾಖದಿಂದ ಸಾಗರ ಸರೋವರಗಳು ಕಾಯ್ದು ನೀರು ಮತ್ತೆ ಮತ್ತೆ ಆವಿಯಾಗಿ ಹೋಗಿ ಆಕಾಶದಲ್ಲಿ ಮೋಡಗಟ್ಟಿತು. ಇದರಿಂದ ಮತ್ತೆಮತ್ತೆ ಮಳೆಯಾಗಿ ಇಳೆಗೆ ಹೊಸನೀರು ಬಂದು ಸೇರತೊಡಗಿತು. ಪರ್ವತ, ಬೆಟ್ಟ, ಕಾಡು ಮೇಡುಗಳಲ್ಲಿ ಬಿದ್ದ ಮಳೆನೀರು ತಗ್ಗಿಗೆ ಹರಿದು ನದಿ, ಹಳ್ಳ ಕೊಳ್ಳಗಳಾದವು.

ಇಷ್ಟೆಲ್ಲ ಅವಾಂತರಗಳಾದರೂ ಮೊದಲು ಸಾಗರ ಸರೋವರಗಳುಂಟಾದಾಗ ಭೂಭಾಗ ಮತ್ತು ಜಲಭಾಗ ಯಾವ ಪ್ರಮಾಣದಲ್ಲಿದ್ದವೋ ಅಷ್ಟೇ ಪ್ರಮಾಣದಲ್ಲಿ ಉಳಿದವು. ಭೂಮಿಯ ಒಳಗಡೆಯಲ್ಲಿ ನಡೆಯುತ್ತಿದ್ದ ನಾನಾಬಗೆಯ ಒತ್ತಡದಿಂದ ಆಗಾಗ ಅಲ್ಲಲ್ಲೇ ಭೂಭಾಗ ತಳಕ್ಕೆ ಮುಳುಗಿ ಸಮುದ್ರ ಸರೋವರಗಳಾಗುತ್ತಲೂ, ಸಾಗರದಲ್ಲಿ ಅಲ್ಲಲ್ಲೇ ಹೊಸಹೊಸ ನೆಲ ಮೇಲಕ್ಕೇಳುತ್ತಲೂ ಇದ್ದರೂ ಒಟ್ಟಿನಲ್ಲಿ ಭೂಭಾಗವಾಗಲಿ ಜಲಭಾಗವಾಗಲಿ ಪ್ರಮಾಣದಲ್ಲಿ ಏಕಪ್ರಕಾರವಾಗಿ ಉಳಿಯಿತು.

ಅಂತು ಇಷ್ಟೆಲ್ಲ ಅವಾಂತರವಾಗಿ ಈಗಭೂಮಿಯ ಕೇಂದ್ರದಲ್ಲಿ ಐದು ಆರುಸಾವಿರಮೈಲಿ ದಪ್ಪಕ್ಕೆ ಕಬ್ಬಿಣ ನಿಕ್ಕಲು ಬೆರತು ಬೆಳ್ಳಗೆ ಕಾಯ್ದು ದ್ರವರೂಪದಲ್ಲಿ ತುಂಬಿದೆ. ಅದರಮೇಲೆ ಸುತ್ತಲೂ ಸುಮಾರು ಸಾವಿರ ಮೈಲಿ ದಪ್ಪಕ್ಕೆ ಹಸುರು ಅಥವಾ ಕಂದುಬಣ್ಣದ ಒಂದುಬಗೆಯ ಕಲ್ಲಿನ ಪದರ. ಆಮೇಲೆ ಅದಕ್ಕೂ ಹಗುರವಾದ ಸುಮಾರು ೩೦ ಮೈಲಿ ದಪ್ಪದ ಕಲ್ಲಿನ ಪದರ. ಈ ಪೊರೆಯ ಮೇಲ್ಗಡೆ ವಾತಾವರಣದ ಹಾವಳಿಗೆ ಸಿಕ್ಕಿ ಯುಗ ಯುಗಾಂತರದಿಂದ ಕಲ್ಲು ಸವೆದು ಪುಡಿಯಾಗಿ ಹರಡಿರುವ

ಮಣ್ಣು, ಇದರಮೇಲೆ ಭೂಮಿಯನ್ನು ಬಳಸಿ ಸಾಗರ, ಸರೋವರ ನದಿಗಳಲ್ಲಿ ತುಂಬಿರುವ ನೀರು, ಈ ಪದರಗಳಿಂದಕೂಡಿದ ಭೂಮಿಯಮೇಲೆ ಸುತ್ತಲೂ ವಾತಾವರಣವಾಗಿ ೬-೭ ಮೈಲಿ ದೂರದವರೆಗೆ ತುಂಬಿರುವ ಗಾಳಿ ಹೀಗೆ ಒಂದರಮೇಲೆ ಒಂದುನಿಂತು ಭೂಮಿ ಈರುಳ್ಳಿಯಂತೆ ಪದರಗಳನ್ನುಳ್ಳುದಾಗಿದೆ.

ಮತ್ತೆ ನಾವೀಗ ಹಿಂದಕ್ಕೆ ಹೋಗೋಣ. ಭೂಮಿಯ ಕರಿತೆರೆ ತೆರೆದು, ಶಕ್ತಿದಾಯಕ ಸೂರ್ಯನ ಕಿರಣಗಳು ಭೂಮಿಯಮೇಲೆ ಬಿದ್ದ ವಿಷಯ ಹಿಂದೆ ಹೇಳಿದೆ. ಈ ಸೂರ್ಯನಿಲ್ಲದಿದ್ದರೆ ಈ ಸುಂದರವಾದ ಪ್ರಪಂಚ ಕತ್ತಲಾದ ಮತ್ತು ನಿರ್ಜೀವದಿಂದ ಕೂಡಿದ ಬಂಜರುಭೂಮಿಯಾಗುತ್ತಿತ್ತೆಂಬುದನ್ನು ನಾವು ಮನಗಾಣಬೇಕು. ಅಸಂಖ್ಯಾತ ಶತಮಾನಗಳಕಾಲ ಸೂರ್ಯ ಅಪಾರಬೆಳಕು ಮತ್ತು ಶಾಖಗಳನ್ನು ಕೊಟ್ಟಿದೆ ಇನ್ನೂ ಅನಂತಕಾಲ ಈ ಜೀವತುಂಬುವ ಪ್ರವಾಹವನ್ನು ಕೊಡುತ್ತಲೇ ಇರುತ್ತದೆ. ಈ ಪ್ರವಾಹದ ಕಿಂಚಿತುಭಾಗವನ್ನು ಭೂಮಿ ಆಕರ್ಷಿಸಿ ಜೀವವೆಂದು ಕರೆಯುವ ಶಕ್ತಿಯಾಗಿ ಪರಿವರ್ತಿಸುತ್ತಿದೆ.

ಎಲ್ಲ ಶಕ್ತಿಗಳಲ್ಲಿಯೂ ನಾವು ಗಮನಿಸಬೇಕಾದ ಒಂದು ಮುಖ್ಯ ವಿಚಾರವಿದೆ. ಅದೇನೆಂದರೆ ಶಕ್ತಿಯ ಫಲದಿಂದ ಶಾಖ. ಇದ್ದಲಿನ ಗಟ್ಟಿಯೊಂದರಲ್ಲಿ ಅಂತರ್ಗತ ಶಕ್ತಿಯಿದೆ. ಅದನ್ನು ಬೆಂಕಿಯಮೇಲೆ ಹಾಕಿದ ಕೂಡಲೆ ಆ ಶಕ್ತಿಯು ಪರಿವರ್ತಿತವಾಗಿ ನಮಗೆ ಶಾಖ ಸಿಕ್ಕುತ್ತದೆ.

ಶಕ್ತಿ ಶಾಖವನ್ನು ಉತ್ಪತ್ತಿ ಮಾಡುತ್ತದೆ. ಶಾಖವೇ ಜೀವ. ಶಾಖವಿಲ್ಲದೆ ಭೂಮಿಯ ಮೇಲೆ ಜೀವಿಸುವುದು ಸಾಧ್ಯವೇ ಇಲ್ಲ. ಈ ಶಕ್ತಿಗೆ ಆಧಾರ ನಮ್ಮ ಸೂರ್ಯ. ಸಮುದ್ರದಿಂದ ನೀರನ್ನು ಮೇಲಕ್ಕೆತ್ತುವವನು ಸೂರ್ಯ. ಸೂರ್ಯನೇ ಅದನ್ನು ನೀರಾಗಿ ಪರಿವರ್ತಿಸುತ್ತಾನೆ. ಸೂರ್ಯನೇ ಅದನ್ನು ಕಾಡುಮೇಡುಗಳಮೇಲೆ ಸುರಿಸುತ್ತಾನೆ. ಬೆಟ್ಟಗಳ ತಪ್ಪಲುಗಳ ಮೂಲಕ ಕೆಳಕ್ಕೆ ಆ ನೀರು ನದಿಗಳಾಗಿಯೂ ಜಲಪಾತ

ಗಳಾಗಿಯೂ ಹರಿಯುತ್ತದೆ. ಹಸುರುಸಸ್ಯಗಳು ಸೂರ್ಯನಿಂದಶಕ್ತಿಯನ್ನು ತೆಗೆದುಕೊಳ್ಳುತ್ತವೆ. ಗೊಬ್ಬರದಲ್ಲಿ ಕೆಲವು ಕ್ರಿಮಿಗಳು ಜೀವಕೊಡುವ ಪದಾರ್ಥಗಳಾಗಿ ಈ ಶಕ್ತಿಯನ್ನು ಪರಿವರ್ತಿಸುತ್ತವೆ. ಆ ಕ್ರಿಮಿಗಳು ಈ ಪದಾರ್ಥಗಳನ್ನು ಮತ್ತೆ ನೈಟ್ರೇಟುಗಳಾಗಿ ಮಾರ್ಪಡಿಸುತ್ತವೆ. ಈ ನೈಟ್ರೇಟುಗಳ ಸಹಾಯದಿಂದ ಸಸ್ಯಗಳು ಬಹಳ ಫಲವತ್ತಾಗಿ ಬೆಳೆಯುತ್ತವೆ.

ಹೀಗೆ ಎಲ್ಲ ಶಕ್ತಿಗಳ ಮೂಲವೂ ಒಂದಲ್ಲ ಒಂದು ಬಗೆಯಲ್ಲಿ ಸೂರ್ಯನೇ. ಇದೆಷ್ಟು ಆಶ್ಚರ್ಯಕರವಾದುದು!

* ಯಾವನು ನಮ್ಮ ಬುದ್ಧಿ ಶಕ್ತಿಗಳನ್ನು ಪ್ರಚೋದಿಸುವನೋ
ಆ ಶ್ರೇಷ್ಠ ತೇಜಸ್ಸನ್ನುಳ್ಳ ಸೂರ್ಯದೇವನನ್ನು ಧ್ಯಾನಿಸೋಣ.





* ತತ್ಸವಿತುರ್ವರೇಣ್ಯಂ ।
ಭರ್ಗೋದೇವಸ್ಯ ಧೀಮಹಿ ।
ಧಿಯೋ ಯೋನಃ ಪ್ರಚೋದಯಾತ್ ॥

–ಗಾಯತ್ರಿ.




ಸೂರ್ಯನ ಸೃಷ್ಟಿಶಕ್ತಿಯ ಕಿರಣಗಳು ಭೂಮಿಯಮೇಲೆ ಬಿದ್ದು ಸಮುದ್ರದ ಚೌಳು ನೀರನ್ನು ಹೊಕ್ಕಾಗ ಅಲ್ಲಿ ಒಂದು ಚಮತ್ಕಾರ ನಡೆಯಿತು. ಅದುತುಂಬ ಸ್ವಾರಸ್ಯವೂ ಮಹತ್ವೂ ಆದವಿಷಯ. ಅದೇನು?

ಜೀವದ ಉದಯವಾಯಿತು. ಜೀವ ಹೇಗೆ ಪ್ರಾರಂಭವಾಯಿತು? ಭೂಮಿಯಲ್ಲಿನ ರಾಸಾಯನಿಕ ಸಂಯೋಗದಿಂದಾಗಿ ಯಾವುದೋಉದ್ದೇಶ ವೊಂದರ ಸಲುವಾಗಿ ಜೀವೋದಯವಾಯಿತು. ಜೀವಿಯು ಜೀವಿ ಯಿಂದಲೇ ಹುಟ್ಟಬೇಕೆಂಬ ನಂಬಿಕೆ ಈಗಿನ ಜ್ಞಾನದಿಂದಬರುತ್ತದೆ. ಆದರೆ ಆಗ ಭೂಮಿಯ ಶಾಖಪೂರ್ಣ ದಿನಗಳಲ್ಲಿ ರಾಶಿ ರಾಶಿಯಾಗಿ ನೀರಿನಲ್ಲಿ ತೇಲುತ್ತಿದ್ದ ಯಾವುದೋ ಜಡವಸ್ತುಗಳಿಂದ ಅತಿ ಸೂಕ್ಷ್ಮವಾದ ಜೀವ ಕಣಗಳು ಉದಯವಾದವು ಎಂದು ಕಾಣುತ್ತದೆ. ಇದು ನಿಜ ವಿದ್ದರೂ ಜೀವ ಹೇಗೆ ಪ್ರಾರಂಭವಾಯಿತೆಂಬುದು ಊಹೆಗೆ ಸಿಲುಕದುದಾ ಗಿದೆ. ಏಕೆಂದರೆ, ಆದಿಪ್ರಾಣಿಗಳು ಹೇಗೆ ಬಂದವೆಂಬುದನ್ನು ಇನ್ನೂ ಕಂಡುಹಿಡಿಯಬೇಕಾಗಿದೆ. ಜೀವವಿಲ್ಲದ ಪ್ರಪಂಚದಲ್ಲಿ ಜೀವ ಹೇಗೆ ಮೊದಲಾಯಿತು ಎಂಬುದನ್ನು ಇನ್ನೂ ಯಾರೂ ಕಂಡುಹಿಡಿದಿಲ್ಲ. ಮರುಭೂಮಿಯಾಗಿದ್ದ ಪ್ರಪಂಚ ಹೂಫಲ ತುಂಬಿದ ಮತ್ತೂ ಅದು ತುಂಬಿರುವ ಪ್ರಪಂಚ ಹೇಗಾಯಿತೆಂಬುದು ಸೃಷ್ಟಿಯ ವೈಚಿತ್ರ್ಯಗಳಲ್ಲಿ ದೊಡ್ಡದು. ಇದು ಅಭೇದವಾದ ಗೂಢವಾಗಿಯೇ ಉಳಿದಿದೆ. ಜೀವ ಹೇಗೆ ಪ್ರಾರಂಭವಾಯಿತೆಂದು ನಾವು ಹೇಳಲಾಗದಿದ್ದರೂ ಅದು ಎಲ್ಲಿ ಮೊದಲಾಯಿತೆಂಬುದು ತಿಳಿದಿದೆ. ಅದು ಪ್ರಾರಂಭವಾದುದು ಸಮುದ್ರದಲ್ಲಿ.

ಯಾವಾಗ ಈ ಪ್ರಪಂಚದಲ್ಲಿ ಜಡಸ್ಥಿತಿಹೋಗಿ ಜೀವಿ ಕಾಣಿಸಿ ಕೊಂಡಿತು ಎಂದು ನಿಖರವಾಗಿ ಹೇಳುವುದು ಅಸಾಧ್ಯವಾಗಿದೆ. ಮಧ್ಯಾಹ್ನ ವನ್ನು ಹಗಲೆಂದೂ ಮಧ್ಯರಾತ್ರಿಯನ್ನು ರಾತ್ರಿಎಂದೂ ನಿಸ್ಸಂದೇಹವಾಗಿ

ಹೇಳಬಹುದು. ಆದರೆ ಮುಂಜಾನೆ ಸಮಯದಲ್ಲಿ ರಾತ್ರಿ ಹಗಲುಗಳ ಸಂಗಮಸ್ಥಳದಲ್ಲಿ ಹಗಲಾವುದು ಇರುಳಾವುದು ವಿಂಗಡಿಸಿ ತೋರಿಸುವುದು ಸುಲಭವಲ್ಲ. ಹಗಲು ರಾತ್ರಿಗಳ ಆದಿ ಅಂತ್ಯಗಳಿಗೆ ಅಂತರವೇ ಇಲ್ಲ. ಹಾಗೆಯೇ ನಿರ್ಜೀವ ಸಜೀವಗಳಕೊನೆ ಮೊದಲಿನಲ್ಲಿ ಅಂತರವಿಲ್ಲ. ಎಲ್ಲವನ್ನೂ ಉರಿಸಿ, ಕರಗಿಸಿ ಅನಿಲರೂಪಕ್ಕೆ ತರುವ ಮಹಾ ಉಷ್ಣಸ್ಥಿತಿಗೂ ಶಾಖವಿಸರ್ಜನೆಯಿಂದ ಆರಿ ತಂಪಾಗಿ ಹಿಮದಂತೆ ಶೀತಲವಾಗುವ ಸ್ಥಿತಿಗೂ ಮಧ್ಯವಾದ ಸಾಮಾನ್ಯ ಸ್ಥಿತಿಯಲ್ಲಿಯೇ ಜೀವದ ಮೊಳಕೆ ಯೊಡೆದುದು. ಆ ಜೀವಸೆಲೆಯೇ ನಿರ್ಜೀವ ಸಜೀವಗಳೆಂಬ ಇರುಳು ಹಗಲುಗಳ ನಡುವಿರುವ ಸಂಧ್ಯೆ. ಅದರ ಮೌನವಾಣಿಯೇ ಬಾಳಿನ ಉದಯರಾಗ. ಮಹಾಸಾಗರ ಸರೋವರಗಳ ಆಳವಿಲ್ಲದ ತಳ ಕರೆಗಳೇ ಈ ಆದಿ ಜೀವಿಗಳ ತವರೂರು.

ಈಗ ಜಡ, ಜೀವಿಗಳ ಭೇದಕೊಂಚ ಮಟ್ಟಿಗೆ ತಿಳಿಯೋಣ. ಜೀವಕೆ ನಿರ್ಜೀವಕ್ಕಿಲ್ಲದಿರುವ ಎರಡು ಮುಖ್ಯಗುಣಗಳಿರುವುವು.

೧. ಸ್ವಯಂ ಚಲನಶಕ್ತಿ– ತನ್ನಿಚ್ಛೆಯಂತೆ ಓಡಾಡಬಲ್ಲ ಶಕ್ತಿ.

೨. ವೇದನಶಕ್ತಿ-ತನಗಾದ ಹಿತ ಅಹಿತಗಳನ್ನು ಅನುಭವಿಸುವಶಕ್ತಿ

ಇವೆರಡೂ ಒಂದೇ ಶಕ್ತಿಯ ಎರಡು ರೂಪಗಳು ಇವಲ್ಲದೆ ಇನ್ನೂ ಎರಡು ಗುಣಗಳು ಆವಶ್ಯಕ.

೧. ಬೆಳೆಯುವ ಶಕ್ತಿ.

೨. ತನ್ನಂತೆಯೇ ಮತ್ತೊಂದನ್ನು ಉತ್ಪತ್ತಿಮಾಡುವ ಶಕ್ತಿ.

ಸೃಷ್ಟಿಯಲ್ಲಿ ಮೂಲವಸ್ತುಗಳ ಸಂಯೋಗ ವಿಯೋಗ ಸತತವೂ ನಡೆಯುತ್ತಿತ್ತು. ಈ ಮೂಲವಸ್ತುಗಳ ಸಂಯೋಗದಿಂದಲೇ ಜೀವವು ಉದಯಿಸಿದ್ದು. ಜೀವಸೆಲೆಯ ಉತ್ಪತ್ತಿಗೆ ಮೊದಲು ಜಡ ಅಣುಗಳ ಅಂತರಾಳದಲ್ಲಿ ಚಲನ ವಲನ ಕ್ರಾಂತಿಗಳು ನಿರಂತರ ನಡೆಯುತ್ತಿದ್ದುವು.

ಆದರ ಫಲವೇ ಜೀವದ ಉತ್ಪತ್ತಿ ಮತ್ತು ಆ ಜೀವಿಗಳಿಗೆ ಬಂದ ಸ್ವಯಂ ಚಲನಶಕ್ತಿ. ಈ ಶಕ್ತಿಯ ಮತ್ತೊಂದು ಭಾಗವೇ ವೇದನಶಕ್ತಿ. ವೇದನ ಶಕ್ತಿಯಿಂದ ರಾಗಗಳು ಮೂಡಿದವು. ರಾಗದಿಂದ ಬುದ್ಧಿ ಅರಳಿತು. ಹೀಗೆ ಸ್ವಯಂಚಲನ ಮತ್ತು ವೇದನಶಕ್ತಿಗಳೇ ಈ ಸೂಕ್ಷ್ಮ ಜೀವಾಣುಗಳು ಪರಿಣಾಮಗೊಂಡು ಈಗಿನಜೀವಕೋಟಿಗೆ ಕಾರಣವಾದವು. ಉತ್ಕ್ರಾಂತಿ ಅಧ್ಯಾಯಕ್ಕೆ ಪೀಠಿಕೆಯಾದವು.

ಅಸ್ಪಷ್ಟವಾದ ಕಾಳ ಹೊಗೆಯ ಮುದ್ದೆಯಂತಿದ್ದ ಸ್ಥಿತಿಯಿಂದ ಸ್ಪಷ್ಟವೂ ಮಹತ್ತಾದುದೂ ಆದ ಸೂರ್ಯ ರೂಪುಗೊಂಡಿತು. ಆದರಿಂದ ಸಿಡಿದ ಭಾಗ ಭೂಮಿಯಾಯಿತು. ಆಕಾಶವನ್ನು ಆವರಿಸಿದ್ದ ಹಬೆಯು ಜಲವಾಗಿ ಭೂಮಿಯ ಹಳ್ಳಕೊಳ್ಳಗಳಲ್ಲಿ ತುಂಬಿಕೊಂಡಿತು. ಆಮ್ಲಜನಕ, ಜಲಜನಕ, ಇಂಗಾಲಾಮ್ಲ ಮತ್ತು ನೀರಿನ ಹಬೆಗಳೇ ನಮ್ಮ ಭೂಗ್ರಹದ ಆವರಣವಾದುವು. ಭೂಮಿಯು ತಂಪಾಗುತ್ತ ಒಂದು ಹದಕ್ಕೆ ಬಂತು. ಭೂಗೋಳದ ಮೇಲೆ ಬೀಳುತ್ತಿದ್ದ ಸೂರ್ಯನ ಕಾವು ಒಂದು ಹದದಲ್ಲಿತ್ತು. ಈ ಮೂರು ಹದವು ಒಂದನ್ನೊಂದು ಸಮಂಜಸವಾಗಿ ಹೊಂದಿಕೊಂಡಿದ್ದ ಒಂದು ಒಳ್ಳೆಯ ಕಾಲದಲ್ಲಿ ಸಮುದ್ರದ ನೀರಿನಲ್ಲಿ ಏನೋ ಒಂದು ರಾಸಾಯನಿಕ ಸಂಯೋಗ ಉಂಟಾಯಿತು. ಇದರ ಪರಿಣಾಮವಾಗಿ ಜೀವೋತ್ಪತ್ತಿಯಾಯಿತು. ಆ ಹದ ಮತ್ತೆ ಬರಲಿಲ್ಲ. ಮತ್ತೆ ಹಾಗೆ ನಿರ್ಜೀವದಿಂದ ಜೀವ ಉದ್ಭವವಾಗಲಿಲ್ಲ.

ಮೊದಲ ಜೀವಿಗಳು ಗಂಜಿಯ ಕೆನೆಯಂತೆ ಅಂಟಾಗಿ ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾಗಿದ್ದವು. ಇಂತಹ ಜೀವಾಣುಗಳು ಲಕ್ಷೋಪಲಕ್ಷ ವಾಗಿ ಹುಟ್ಟಿಕೊಂಡವು. ಈ ಮೊದಲಿನ ಜೀವಿಗಳು ಬಹಳ ಮೃದುವಾಗಿ ಮೂಳೆಯಿಲ್ಲದ ವಸ್ತುಗಳಾಗಿದ್ದವು. ಈ ಜೀವಿಗಳಲ್ಲಿ ಉತ್ಪತ್ತಿಶಕ್ತಿ ಅಡ ಗಿತ್ತು. ಅವುಗಳೆ ಈಗಿನ ಜೀವಕೋಟಿಗೆ ಆಧಾರವಾದವು.

## ರಾಸಾಯನಿಕ ಕಾಮಗಾರಿ

ಆದಿಯ ಜೀವಾಣುಗಳ ದೇಹ ಒಂದು ರಾಸಾಯನಿಕ ಕಾಮಗಾರಿಯಂತಿತ್ತು. ಅದು ನೀರು ಗಾಳಿಯನ್ನು ಹೀರಿ, ಸೂರ್ಯ ಕಿರಣಗಳ ಸಹಾಯದಿಂದ ಮುಂದಿನ ಇದ್ದ ಪೀಳಿಗೆಯನ್ನು ಉತ್ಪತ್ತಿಮಾಡಿತು. ಕಾಲ ಕಳೆಯಿತು. ಈ ಜೀವಿಗಳಲ್ಲಿ ಒಂದು ಮಾರ್ಪಾಟುಂಟಾಯಿತು. ಆ ಮಾರ್ಪಾಟು ಸುತ್ತಮುತ್ತಣ ವಾತಾವರಣವನ್ನನುಸರಿಸಿ ನಡೆಯಿತು. ಅದು ತುಂಬ ಸ್ವಾರಸ್ಯವಾದ ವಿಷಯ.

ಜೀವಿಗಳ ಉಗಮುದಮೊದಲನೆಯ ಘಟ್ಟದಲ್ಲಿ ಎರಡು ಭಿನ್ನ ಭಿನ್ನ ಪೋಷಣ ಮಾರ್ಗಗಳುಂಟಾದವು; ಒಂದು ಪ್ರಾಕೃತಿಕ ರಾಸಾಯನಿಕ ಪದಾರ್ಥಗಳನ್ನು ರಕ್ತಗತಮಾಡಿಕೊಳ್ಳುವುದರಲ್ಲಿ ಮುಂದುವರಿದ ದಾರಿ ಮತ್ತೊಂದು ಪರಜೀವಿಗಳನ್ನು ಆಶ್ರಯಿಸಿಕೊಂಡು ಹೊಟ್ಟೆ ಹೊರೆಯುವ ಮಾರ್ಗ. ಮೊದಲನೆಯದು ಸಸ್ಯಗಳ ಮತ್ತೊಂದು ಪ್ರಾಣಿಗಳ ಆವಿರ್ಭಾವಕ್ಕೆ ಕಾರಣವಾದವು: ಜೀವಾಣುಗಳು ಹಲವು ಒಂದರೊಡನೊಂದು ಒಟ್ಟುಗೂಡಿ ರೂಪುಗೊಂಡವು. ಹೀಗೆ ರೂಪುಗೊಂಡ ಜೀವಿ ಮೊದಲು ಸಾಧಾರಣ ಕಣ್ಣಿಗೂಕಾಣುವಂತಾದುದು ನೀರುಗಿಡದ ರೂಪದಲ್ಲಿ.

## ಸಸ್ಯಗಳೂ ಜೀವಿಗಳು

ಹೀಗೆ ಸೂಕ್ಷ್ಮವಾಗಿದ್ದ ಜೀವಾಣುಗಳು ಒಟ್ಟುಸೇರಿ ಗಿಡವಾಗಿ ಬೆಳೆದವು. ಅಂದರೆ ಸಸ್ಯಗಳೂ ಒಂದುಬಗೆಯ ಜೀವಿಗಳೆಂದಾಯಿತು. ಅದೇನೂ ತಪ್ಪುಮಾತಲ್ಲ. ಗಿಡಗಳಲ್ಲೂ ಜೀವವಿದೆ ಎಂಬುದನ್ನು ಪ್ರಸಿದ್ಧ ವಿಜ್ಞಾನಿ ಜಗದೀಶಚಂದ್ರ ಬೋಸರು ಶಾಸ್ತ್ರೋಕ್ತವಾಗಿ ಸ್ಪಷ್ಟಪಡಿಸಿದ್ದಾರೆ.

ಮೊಟ್ಟೆಯೊಡೆದು ಮರಿಯಾಗಿ ಹಕ್ಕಿ ಬೆಳೆಯುತ್ತದೆ. ಅಂತೆಯೇ ಬೀಜ ಮೊಳೆಯೊಡೆದು ಅಂಕುರಿಸಿ ಸಸಿಯಾಗಿ ಬೆಳೆಯುತ್ತದೆ. ಗಿಡಗಳಿಗೂ ಇತರ ಜೀವಿಗಳಿಗಿರುವಂತೆಯೇ ಬೆಳವಣಿಗೆ, ಉತ್ಪತ್ತಿ, ವೇದನಶಕ್ತಿಗಳಿವೆ. ಇದರಿಂದ ಗಿಡಗಳೂ ಒಂದು ಬಗೆಯ ಜೀವಿಗಳೆಂದು ನಂಬಿ ಮುಂದೆ ಹೋಗೋಣ.



ಜಗದೀಶಚಂದ್ರ ಬೋಸ್

ಜೀವಾಣುಗ್ಗಳು ಒಂದುಗೂಡಿ ನೀರುಗಿಡಗಳ ಉತ್ಪತ್ತಿಯಾಯಿತಷ್ಟೆ. ಆಯಾಸ್ಥಳದ ಹವಾ ಗುಣ ಮತ್ತು ಸ್ಥಿತಿಗತಿಗಳನ್ನನುಸರಿಸಿ ನಾನಾತರದ ಗಿಡಬಳ್ಳಿಗಳು ಬೆಳೆದವು. ಇವು ಮೊದಮೊದಲಿಗೆ ನೀರಿನ ತಳದಲ್ಲೇ ಹುಟ್ಟಿದವು. ಆಮೇಲೆ ನೆಲದ ಗುಣ ಅನುಕೂಲವಾದಂತೆ ಭೂಮಿಯ ಮೇಲೂ ಹುಟ್ಟಿಕೊಂಡವು. ಹೀಗೆ ಸಸ್ಯವರ್ಗ ಬೆಳೆದು ಮುಂದೆ ಹುಟ್ಟಿದ ಪ್ರಾಣಿಗಳಿಗೆ ಆಹಾರವನ್ನು ಒದಗಿಸಿದವು.



ಆದಿಯಲ್ಲಿ ನೀರಿನಲ್ಲಿ ಬೆಳೆದ ಗಿಡಗಳಲ್ಲಿ ಕೆಲವು

**ಸಸ್ಯ–ಪ್ರಾಣಿ**

ಸಸ್ಯ ಮತ್ತು ಪ್ರಾಣಿ ಈ ಎರಡುಬಗೆಯ ಸೃಷ್ಟಿಗಳಿಗೂ ಇರುವ ವ್ಯತ್ಯಾಸವಿಷ್ಟೆ. ಸಸ್ಯಗಳು ಮಣ್ಣು, ನೀರು, ಗಾಳಿಗಳ ಮೇಲೆ ಜೀವಿಸ ಬಲ್ಲುವು; ಸೂರ್ಯಪ್ರಭೆ ಸಸ್ಯಗಳ ಮೇಲೆಬಿದ್ದು ಉತ್ಪತ್ತಿಯಾದ ವಸ್ತುಗಳಮೇಲೆ ಪ್ರಾಣಿಗಳು ಜೀವಿಸುವುವು. ಆದ್ದರಿಂದ ಭೂಮಿಯಮೇಲೆ ಸಸ್ಯವರ್ಗದ ಸ್ಥಾನ ಅಡಿಗೆಮಾಡುವ ಸ್ವಭಾವದ್ದು. ಕಲ್ಲಿದ್ದಲು ಉರಿದರೆ ಶಾಖವನ್ನುಂಟು ಮಾಡುವಂತೆ ಸಸ್ಯವು ಆಹಾರವಾದಾಗ ಪ್ರಾಣಿಗಳಿಗೆ ಜೀವವಾದ ಶಾಖವನ್ನು ಕೊಡುತ್ತದೆ.

ಈ ಶಾಖ ಕಗ್ಗನೆಯ ಕಲ್ಲಿದ್ದಲಿನಲ್ಲಾಗಲಿ ಹಸುರಾಗಿ ಬೆಳೆಯುತ್ತಿರುವ ಸಸ್ಯದಲ್ಲಾಗಲಿ ಅಂತರ್ಗತವಾಗಿರಲಿ ಅದು ಮೊದಲು ಅವುಗಳಿಗೆ ಸೂರ್ಯನಿಂದ ಬಂದುದು. ತೇಜಸ್ವಿಯಾದ ಆ ಸೂರ್ಯ ಸೃಷ್ಟಿಶಕ್ತಿಯುಳ್ಳದ್ದು. ಅಪೂರ್ವವಾದ ಸೂರ್ಯಪ್ರಭೆ ದೇಹಸೀಸೆಯಲ್ಲಿ ತುಂಬಿಡಲಾಗಿರುವ ಜೀವ. ಸಾವು ಸದ್ದಿಲ್ಲದ ನಡಿಗೆಯಿಂದ ಬಂದು ಆ ಸೀಸೆಯ ಬಿರುಡೆಯನ್ನು ತೆರೆದು ಆ ಪ್ರಭೆಯನ್ನು ಹೊರಗೆ ಬಿಟ್ಟು ಮತ್ತೊಂದು ಜೀವಕ್ಕೆ ಕಾರಣವಾಗುವ ದ್ವಿಭಾಷಿ ಎಂದು ದೊಡ್ಡವರು ಹೇಳುತ್ತಾರೆ.




ನಿಷ್ಕೃಷ್ಟವಾದ ಸ್ವರೂಪ ಅಥವಾ ಆಕಾರಗಳಿಲ್ಲದೆ ಅನಂತವಾದ ಸಮುದ್ರದಲ್ಲಿ ನಿಶ್ಚಿಂತೆಯಿಂದ ಈಜಾಡುತ್ತಿದ್ದ ಜೀವಾಣುಗಳೇ ಈಗಿನ ಜೀವಾನುಕೋಟಿಗೆ, ಮನುಷ್ಯನಿಗೂ ಆದಿ. ಅವುಗಳಿಂದ ನಮ್ಮ ಜನಾಂಗದ ಚರಿತ್ರೆ ಮೊದಲಾಗುತ್ತದೆ; ಮತ್ತು ಅಖಂಡವಾಗಿ ಇಂದಿನವರೆಗೂ ಬೆಳೆದು ಬಂದಿದೆ. ಈ ಚರಿತ್ರೆ ಒಂದು ಅದ್ಭುತಕಥೆ. ಅದರ ಸಾಮಗ್ರಿಗಳನ್ನು ವಿಜ್ಞಾನಮಾತ್ರ ಕಂಡುಹಿಡಿಯಬಲ್ಲುದು; ಕವಿತೆಯು ಮಾತ್ರ ಅದರ ಹಿರಿಮೆಯನ್ನು ವರ್ಣಿಸಬಲ್ಲುದು.

ಆದುದರಿಂದ ಆ ಜೀವಾಣುಗಳ ಬಾಳಿನ ವಿಷಯ ಕೊಂಚಮಟ್ಟಿಗಾದರೂ ತಿಳಿಯುವುದು ಮೇಲು. ಅದಕ್ಕಾಗಿ ಅಮೀಬಾ ಎಂಬ ಜೀವಾಣುವಿನ ಕತೆ ತಿಳಿದು ಮುಂದುವರಿಯೋಣ.

**ಅಮೀಬಾ**

ಅಮೀಬಾ ನೀರಿನ ಹಳ್ಳಗಳ ತಳದ ಕೊಚ್ಚೆಯಲ್ಲಿ ವಾಸಿಸುತ್ತದೆ. ಅದು ಬಹುಸೂಕ್ಷ್ಮಜಂತು. ಒಂದನ್ನು ಐನೂರು ಪ್ರಮಾಣದಷ್ಟು ದೊಡ್ಡದುಮಾಡಿ ತೋರಿಸಬಲ್ಲ ಭೂತಕನ್ನಡಿಯಿಂದ ಅದನ್ನು ನೋಡಲು ಸಾಧ್ಯ. ಇದರ ದೇಹ ನೀರಿನ ತುಂತುರುವಿನಂತೆಯೇ ಇದೆ. ಇದರಲ್ಲಿ ಮೂಳೆ, ನರ, ಕೈಕಾಲು ಯಾವುದೂ ಇಲ್ಲ. ಮೈಕಟ್ಟು ಹೇಗೆಬೇಕಾದರೆ ಹಾಗೆ ಬದಲಾಯಿಸಬಲ್ಲುದು. ಆ ಬದಲಾವಣೆಯೇ ಅದರ ಚಲನೆ. ಹೀಗೆ ಚಲಿಸುತ್ತ ೬ ಗಂಟೆಯಲ್ಲಿ ಒಂದು ಅಂಗುಲದೂರ ಚಲಿಸಬಲ್ಲುದು. ದೇಹದಮಧ್ಯೆ ಒಂದು ಜೀವಕಣವಿರುವುದು. ಇದರ ಆಹಾರ ಇದಕ್ಕಿಂತಲೂ

ಸಣ್ಣ ವಸ್ತುಗಳು. ಆ ವಸ್ತು ಸಿಕ್ಕಿದಾಗ ಅದನ್ನು ತನ್ನ ಮೈಯಿಂದ ಬಳಸಿ ಮುಚ್ಚುವುದು. ಆಮಧ್ಯೆ ಆ ಆಹಾರ ಜೀರ್ಣವಾಗುವುದು. ಅಮೀಬಾ ದಲ್ಲಿ ಹೆಣ್ಣುಗಂಡೆಂಬ ಭೇದವಿಲ್ಲ. ಪ್ರಾಣಿಗಳಲ್ಲಿ ಲಿಂಗಭೇದ ಬಂದದ್ದು ಉತ್ತಮ ದರ್ಜೆಯ ಪ್ರಾಣಿಗಳು ಹುಟ್ಟಿಕೊಂಡಾಗ ಮಾತ್ರ. ಲಿಂಗಭೇದ ವಿಲ್ಲದಿದ್ದರೂ ಅಮೀಬಾದ ಪೀಳಿಗೆ ಸಮೃದ್ಧಿಯಾಗಿ ಬೆಳೆಯುತ್ತದೆ. ಒಂದು



ಅಮೀಬಾ–ಅದುಹೇಗೆ ಅದರ ಪೀಳಿಗೆ ಹೇಗೆ ವೃದ್ಧಿಯಾಗುವುದೆಂಬುನ್ನು ತೋರಿಸಿದೆ.

ಅಮೀಬಾದ ಬೆಳವಣಿಗೆ ನಿಂತಮೇಲೆ ಅದರ ದೇಹದ ಮಧ್ಯಭಾಗ ಕಿರಿದಾಗುತ್ತ ಬರುತ್ತದೆ. ಕಿರಿದಾಗುತ್ತ ಬಂದು ಕೊನೆಗೆ ಮಧ್ಯದಲ್ಲಿದ್ದ ಜೀವಕಣದೊಡನೆ ದೇಹ ಎರಡಾಗಿ ಭಾಗವಾಗುತ್ತದೆ. ಆ ಒಂದೊಂದು ಭಾಗವೂ ಮುಂದೆ ಸ್ವತಂತ್ರಜೀವಿ. ಹೀಗೆ ಒಂದು ಎರಡಾಗಿ, ಎರಡು ನಾಲ್ಕಾಗಿ, ನಾಲ್ಕು ಎಂಟಾಗಿ ತಡೆಬಡೆಯಿಲ್ಲದೆ ಬೆಳೆಯುತ್ತವೆ ಈ ಪ್ರಾಣಿಗಳು. ಜೀವಸೃಷ್ಟಿಯ ಪ್ರಾಣಿವರ್ಗದ ಮೂಲದಲ್ಲಿ ವೃದ್ಧಿಯ ಬಗೆ ಈರೀತಿ ವಿಚಿತ್ರವಾಗಿದೆ.

ಮೊದಮೊದಲ ಜೀವಿಗಳು ಅವಿನಾಬಾದಂತವು. ಕಾಲ ಕಳೆದಂತೆ ಒಂದು ಸ್ವಾರಸ್ಯ ಪ್ರಸಂಗ ನಡೆದು ಹಲವು ಪ್ರಾಣಿಗಳು ಒಟ್ಟಿಗೆ ಸೇರಿ ಮೊದಲು ನೀರು ಗಿಡಗಳಾದುದನ್ನು ಹಿಂದೆ ಹೇಳಿದೆ. ವಾತಾವರಣದ ಬದಲಾವಣೆಯನ್ನನುಸರಿಸಿ ಆದ ಮಾರ್ಪಾಡಿನಲ್ಲಿ ಸಸ್ಯವರ್ಗದಂತೆಯೇ ಪ್ರಾಣಿವರ್ಗವೊಂದು ಬೆಳೆಯಿತು. ಹಲವಾರು ಜೀವಾಣುಗಳು ಒಟ್ಟಿಗೆ ಸೇರಿ ಒಂದು ಆಕಾರಪಡೆದು ಒಂದು ಪ್ರಾಣಿಯಾಗುವ ಗುಣ ಈ ಸೂಕ್ಷ್ಮ ಜೀವಾಣುಗಳಿಗೆ ಲಭಿಸಿತು. ಹೀಗೆ ಜೀವಾಣುಗಳು ಒಟ್ಟುಗೂಡಿ ಕೊಂಡಾದ ಪ್ರಾಣಿಗಳಲ್ಲಿ ಅಂಗಗಳು ಹುಟ್ಟಿದವು. ನಿಟ್ಟಿಸಿ ನೋಡುವ ಕಣ್ಣು, ಸಿಕ್ಕಿದುದನ್ನು ನುಂಗುಲು ಬಾಯಿ, ಸ್ಥಳದಿಂದ ಸ್ಥಳಕ್ಕೆ ಓಡಲು ಅನುಗುಣವಾದ ಹುಟ್ಟುಗಳು ಕಾಣಿಸಿಕೊಂಡವು.

## ದೇಹರಚನೆ

ಹೀಗೆಯೇ ಕೆಲವು ಜೀವಾಣುಗಳು ಒಟ್ಟುಸೇರಿ ಮೆದುಳು, ಕೆಲವು ಹೃದಯ, ಕೆಲವು ಕರುಳು ಹೀಗೆ ಆ ಒಂದು ದೊಡ್ಡ ಪ್ರಾಣಿಯ ದೇಹದಲ್ಲಿ ಆಯಾ ಆವರಣಕ್ಕೆ ಅವಶ್ಯಕವಾದ ಅಂಗಗಳಾಗಿ ಮಾರ್ಪಟ್ಟವು. ಹೀಗೆ ಪರಿವರ್ತನೆ ಕ್ರಮೇಣ ನಡೆಯಿತು. ಹೀಗಾದ ಮೇಲೆ ಬಾಯಲ್ಲಿ ಬಿದ್ದ ಆಹಾರ ದೇಹದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಒಯ್ಯಲ್ಪಡಲು ಅನುಕೂಲವಾದ ಅಂಗಗಳು ಕಾಣಿಸಿ ಕೊಂಡವು. ಜಠರ ಆಹಾರವನ್ನು ಪಚನಮಾಡುತ್ತದೆ. ಇತರ ಅಂಗಗಳು ಪಚನವಾದ ಆಹಾರವನ್ನು ರಕ್ತವನ್ನಾಗಿ ಮಾಡುತ್ತವೆ. ರಕ್ತನಾಳಗಳ ಮೂಲಕ ಹೃದಯದಲ್ಲಿ ರಕ್ತ ತುಂಬುತ್ತದೆ. ಆ ರಕ್ತವನ್ನು ಹೃದಯ ಮುಂದಕ್ಕೂ ಹಿಂದಕ್ಕೂ ತಳ್ಳಿ ದೇಹದಲ್ಲೆಲ್ಲಾ ಹರಡುತ್ತದೆ. ಈದಾರಿಯನ್ನನುಸರಿಸಿ ದೇಶಕಾಲ ಬದಲಾದಂತೆ ದೇಹದಲ್ಲಿ ಎಲುಬಿನ ಪಂಜರವುಂಟಾಗುತ್ತದೆ. ಈ ಪಂಜರವನ್ನು ಸರಿಯಾಗಿ ಬಿಗಿದಿರಲು ನರಗಳು ಬೆಳೆಯುತ್ತವೆ. ಇದೆಲ್ಲವನ್ನೂ ಮುಚ್ಚಿ ಒಂದು ಆಕಾರ ಕೊಡಲು ಮಾಂಸ ಖಂಡ, ಚರ್ಮವುಂಟಾಗುತ್ತವೆ. ಹೀಗೆ

ಜೀವಾಣುಗಳಿಂದಾದ ಅಂಗಗಳು ದೇಹದ ಕೆಲಸವನ್ನು ತಮ್ಮ ತಮ್ಮಲ್ಲೇ ಹಂಚಿಕೊಂಡು ನಡೆಸತೊಡಗಿದುವು. ಮೆದುಳು ಈ ಎಲ್ಲ ಅಂಗಗಳಿಗೂ ಯಜಮಾನನಾಗಿ ತಲೆಯಲ್ಲಿ ಕೂತಿತು.

ವಿವಿಧ ಜೀವಾಣುಗಳುಳ್ಳ ಪ್ರಾಣಿಗಳಲ್ಲಿ ಕೆಲಸದ ನಾನಾಶಾಖೆಗಳುಂಟಾಗುವುದು ಸ್ವಾಭಾವಿಕ. ಕೆಲವು ಜೀವಾಣುಗಳ ವಿಶೇಷ ಕಾರ್ಯಗಳಿಂದ ಎಲ್ಲ ಜೀವಾಣುಗಳ ಪೋಷಣೆಯೂ ನಡೆಯುತ್ತದೆ. ಆಹಾರ ಪಚನವಾಗುವುದರಿಂದ ಎಲ್ಲ ಜೀವಾಣುಗಳಿಗೆ ಆಹಾರಸಿಗುತ್ತದೆ. ಅಪ್ರಯೋಜಕ ವಸ್ತುಗಳನ್ನು ದೇಹದ ಹೊರಕ್ಕೆ ತೆರೆಯುವ ಸರ್ವ ಸಾಮಾನ್ಯ ಕಾಲುವೆಗಳಿಂದ ಹೊರದೂಡಲಾಗುತ್ತದೆ. ಎಲ್ಲ ಜೀವಾಣುಗಳ ಇಂಗಾಲವನ್ನೂ ಶ್ವಾಸಕೋಶಗಳಿಗೆ ಒಯ್ಯಲಾಗುತ್ತದೆ. ಅಲ್ಲಿಂದ ಅದು ಮೂಗಿನಿಂದ ಇಂಗಾಲಾಮ್ಲದ ರೂಪದಲ್ಲಿ ಹೊರಹೋಗುತ್ತದೆ. ಅಪ್ರಯೋಜಕ ಘನವಸ್ತುಗಳು ಮುಖ್ಯವಾಗಿ ಶುದ್ಧೀಕರಣಾಂಗವಾದ ದೊಡ್ಡ ಕರುಳುಗಳ ಒಂದು ತುದಿಯ ಮೂಲಕ ಹೊರದೂಡಲಾಗುವುದು. ಮೂಳೆಗಳಾಗಿರುವ ವಿಶೇಷ ಜೀವಾಣುಗಳ ಗುಂಪುಗಳಿಂದ ತೀವ್ರವಾದ ಕಾರ್ಯ ನಡೆಯುತ್ತದೆ. ನರಗಳಿಂದ ಕಾರ್ಯದಲ್ಲಿ ಸಾಮರಸ್ಯವುಂಟಾಗುತ್ತದೆ. ಹೀಗೆ ದೇಹದಲ್ಲಿರುವ ಎಲ್ಲ ಜೀವಂತ ಜೀವಾಣುಗಳಲ್ಲೂ ಚಟುವಟಿಕೆಯನ್ನುಂಟುಮಾಡಲು ಆಹಾರ, ಆಹಾರದೊಂದಿಗೆ ಆಮ್ಲಜನಕ ಬೇಕು.

ಈ ರೀತಿಯ ಸಂಘಟಿತ ಸ್ಥಾನಗಳಲ್ಲಿದ್ದು ಜೀವಾಣುಗಳು ತಮ್ಮ ತಮ್ಮ ಪೋಷಣೆಗೆ ಬೇಕಾದ ವಸ್ತುಗಳನ್ನು ದೇಹದ ಹೊರಗಿನ ಪ್ರಪಂಚದಿಂದ ನೇರವಾಗಿ ಹೊಂದಲಾರವು. ಒಂದೇ ಜೀವಾಣುವಿನಿಂದ ಕೂಡಿರುವ ಅಮೀಬ ಆಹಾರವನ್ನು ನೇರವಾಗಿ ತೆಗೆದುಕೊಳ್ಳಬಲ್ಲುದು; ತಾನು ವಾಸ ಮಾಡುವ ನೀರಿನೊಳಕ್ಕೆ ತನ್ನ ಚರ್ಮದ ಮೂಲಕ ನಿಸ್ಸಾರ ವಸ್ತುಗಳನ್ನು ನೇರವಾಗಿ ಹೊರದೂಡಬಲ್ಲುದು. ಅಮೀಬಾದಂತೆ ದೇಹದಲ್ಲಿರುವ ಜೀವಾಣುಗಳು ನೇರವಾಗಿ

ಆಹಾರವನ್ನು ತೆಗೆದುಕೊಳ್ಳಲಾಗದಿದ್ದರೂ ಒದ್ದೆಯ ಆವರಣದಲ್ಲಿ ದೇಹದೊಳಗಿನ ಪ್ರತಿಯೊಂದು ಜೀವಂತ ಜೀವಾಣುವೂ ದ್ರವದ ಪ್ರವಾಹ ವೊಂದರಲ್ಲಿ ಮಿಂದಿರುತ್ತದೆ. ತನ್ನೊಂದಿಗೆ ಒದ್ದೆ ಆವರಣವನ್ನು ಬೆಳಸಿಕೊಳ್ಳದಿದ್ದರೆ ಮೇಲ್ಮಟ್ಟದ ಪ್ರಾಣಿಗಳ ದೇಹದಲ್ಲಿ ಜೀವಾಣುಗಳು ಬದುಕಿರಲಾರವು. ಅದು ಜೀವಾಣುಗಳ ಹುಟ್ಟಿನಿಂದ ಬಂದ ಗುಣ. ರಕ್ತವೇ ಜೀವಾಣುಗಳಿಗೆ ಸಮುದ್ರಪ್ರಾಯ. ದೇಹದ ನಾನಾ ಅಂಗಗಳಲ್ಲಿ ತುಂಬಿದ ಜೀವಾಣುಗಳು ಅಮಿಾಬಾದಂತೆ ನೇರವಾಗಿ ತಾವೆ ಆಹಾರವನ್ನು ಪಡೆಯಲಾರವು. ಅದರಿಂದ ರಕ್ತ ಆಹಾರ, ಆಮ್ಲಜನಕವನ್ನು ಜೀವಾಣು ಗಳಿಗೊಯ್ಯುತ್ತದೆ. ಮತ್ತು ಇಂಗಾಲಕ್ಕೆ ಸಂಬಂಧಿಸಿದ ಅಶುದ್ಧಿ ವಸ್ತು ಗಳನ್ನು ಇವುಗಳಿಂದ ಮಲಮೂತ್ರದ ರೂಪದಲ್ಲಿ ಹೊರಕ್ಕೆ ತಳ್ಳಿಹಾಕುತ್ತದೆ.

ಜೀವಾಣುಗಳು ಮೇಲ್ಮಟ್ಟದ ಪ್ರಾಣಿಗಳಾಗಿ ವ್ಯವಸ್ಥೆಗೊಂಡಿರು ವುದು ವ್ಯತ್ಯಾಸ, ಮತ್ತು ಅಭಿವೃದ್ಧಿ ಹೊಂದುವಗುಣದಿಂದಷ್ಟೇ ಅಲ್ಲ ಪರ ಸ್ಪರ ಸಹಕಾರ ಚಟುವಟಿಕೆಯ ಮಹತ್ತಿನಿಂದಲೂ.

ಈ ಬಗೆಯಲ್ಲಿ ಸಣ್ಣ ದೊಡ್ಡ ಪ್ರಾಣಿಗಳು ನಾನಾಬಗೆಯವು ಹುಟ್ಟಿ ಕೊಂಡವು. ಅಷ್ಟರಲ್ಲಾಗಲೆ ಸಮುದ್ರದಲ್ಲಿ ಬೇಕಾದಷ್ಟು ಗಿಡಗಂಟಿ ಬೆಳೆದು ಕೊಂಡಿತ್ತು. ಆದುದರಿಂದ ಈ ಹೊಸ ಜಂತುಗಳಿಗೆ ಆಹಾರದ ಅಭಾವವೇನಿರಲಿಲ್ಲ.

**ಗಂಡು-ಹೆಣ್ಣು**

ಹೀಗೆ ಕಣ್ಣಿಗೆ ಕಾಣದ ಸೂಕ್ಷ್ಮಾಣುಗಳಿಂದ ಮೇಲಂತಸ್ತಿನ ಪ್ರಾಣಿಗಳ ಉದ್ಭವವಾಯಿತು. ಆಗ ಪುನರ್ನಿರ್ಮಾಣ ಕಾರ್ಯವು ಬೇರೆ ರೀತಿ ಪಡೆಯಿತು. ಗಂಡುಹೆಣ್ಣು ಭೇದ ಉಂಟಾಯಿತು. ಒಂದು ಲಿಂಗದ ಪ್ರಾಣಿಗಳಲ್ಲಿನ ರಕ್ತ ಮಾಂಸಕ್ಕೆ ಬೇರೊಂದು ಲಿಂಗ ಜೀವದ ಸಹವಾಸದ ಆಸೆ ಮೂಡಿತು. ಅದರ ಫಲವಾಗಿ ಹೆಣ್ಣು ಗಂಡು ಕೂಡಿ ಪೀಳಿಗೆ ಬೆಳೆಯಲು ಅನುಕೂಲವಾಯಿತು. ಗಂಡುಪ್ರಾಣಿಯಲ್ಲಿ ವೃದ್ಧಿಯಾದ

ಜೀವಕಣಗಳು ಗಂಡು ಹೆಣ್ಣು ಕೂಡಿದಾಗ ಹೆಣ್ಣಿನ ದೇಹದಲ್ಲಿ ಸೇರಿ ಅಲ್ಲಿನ ಜೀವಕಣಗಳೊಡನೆಬೆರೆತು ಅಲ್ಲಿ ಬೆಳೆದು ಹೊರಗೆ ಬಂದು ಪೂರ್ಣ ಜೀವಿಗಳಾಗಿ ಬದುಕು ಸಾಗಿಸಲು ಪ್ರಾರಂಭವಾಯಿತು.

ಆಮೇಲೆ ಆದ ಉತ್ಕ್ರಾಂತಿಯ ಉದ್ದಕ್ಕೂ ಹೆಣ್ಣು ಗಂಡು ಒಂದನ್ನೊಂದ ನೋಡಿದೊಡನೆ ಅವುಗಳಲ್ಲಡಗಿದ್ದ ಕಾಮ ಉದ್ರೇಕಗೊಂಡು ಒಂದನ್ನೊಂದು ಕೂಡುವ ಗುಣ ಬೆಳೆದು ಬಂತು. ಸಂತಾನಾಭಿವೃದ್ಧಿಗಾಗಿ ನಿಸರ್ಗವು ಹಲವು ಬಗೆಯ – ನೋಟ, ಶ್ರವಣ, ವಾಸನೆ, ರುಚಿ, ಸ್ಪರ್ಶ – ಇಂದ್ರಿಯ ಶಕ್ತಿಗಳನ್ನು ಚುರುಕುಗೊಳಿಸಿತು. ಅಂಗ ಸಂಬಂಧ ಉಂಟಾಗುವಂತೆ ಒಂದೊಂದು ಬಗೆಯ ಪ್ರಾಣಿಗಳಲ್ಲಿ ಒಂದೊಂದು ಬಗೆಯಲ್ಲಿ ಇಂದ್ರಿಯಾಸಕ್ತಿ ವೃದ್ಧಿಯಾಯಿತು. ಉದಾಹರಣೆಗೆ ಗಂಡು ನವಿಲು ತನ್ನ ಸಹಸ್ರ ಬಣ್ಣದ ಪುಕ್ಕ ಕೆದರಿ ಕುಣಿಯ ತೊಡಗಿದರೆ ಅದನ್ನು ನೋಡಿದೊಡನೆಯೇ ವ್ಯಾಮೋಹ ಹುಟ್ಟಿಸುವಂತ ನೋಟದ ಶಕ್ತಿ ಹೆಣ್ಣು ನವಿಲಿಗಿದೆ. ಹೀಗೆ ಒಂದೊಂದು ಬಗೆಯ ಪ್ರಾಣಿಗಳಲ್ಲಿ ಒಂದೊಂದು ಬಗೆಯ ಇಂದ್ರಿಯ ಚಟುವಟಿಕೆ ಬಲವಾಗಿದೆ.

ಈ ಕ್ರಮದಲ್ಲಿ ಕಾಲ ಕಳೆದಂತೆ ಸನ್ನಿವೇಶ ಬದಲಾದಂತೆ ಅದಕ್ಕನುಗುಣವಾದ ಪರಿಣಾಮದಿಂದ ಹುಟ್ಟಿಕೊಂಡ ಪ್ರಾಣಿಗಳ ಕತೆ ಬಹಳ ದೊಡ್ಡದು. ಅದೆಲ್ಲಾ ವಿವರ ಇಲ್ಲಿ ಹೇಳಲಾಗುವುದಿಲ್ಲ.

**ಸಂಕ್ಷೇಪ**

ಕ್ರಮೇಣ ಒಂದರಿಂದ ಇನ್ನೊಂದು ಪ್ರಾಣಿ ಅವತರಿಸಿದ ರೀತಿಯನ್ನು ಬಹು ಸಂಕ್ಷೇಪವಾಗಿ ಮುಂದಿನ ಚಿತ್ರದಲ್ಲಿ ತಿಳಿಸಿದೆ. ಅಮೀಬಾದಿಂದ ಚಿಪ್ಪಿನ ಹುಳುಗಳು, ಅದರಿಂದ ಏಡಿ ಜಾತಿಗೆ ಸೇರಿದ ಪ್ರಾಣಿಗಳು, ಮುಂದೆ ಮೀನು ಜಾತಿಗೆ ಸೇರಿದ ಪ್ರಾಣಿಗಳು ಹುಟ್ಟಿಕೊಂಡವು. ಇವುಗಳಲ್ಲಿ ನಾನಾ ಬಗೆಯ ನಾನಾ ರೂಪಿನ, ನಾನಾ ಗಾತ್ರದವಿದ್ದವು,




1 ಅಮೀಬಾ, 2, 3, 4, 5, ಏಡಿಜಾತಿ, 6, 7, 8. ಮೀನುಜಾತಿ

ಕೆಲವು ಪ್ರಾಣಿಗಳಂತೂ ವಿಚಿತ್ರವಾಗಿಯೂ ಭಯಂಕರವಾಗಿಯೂ ಬೆಳೆದವು. ಈ ಪ್ರಾಣಿಗಳ ಬೆಳವಣಿಗೆಯ ಕತೆಯನ್ನು ಅತಿ ಸಂಕ್ಷೇಪ ವಾಗಿ ಹೇಳಿದೆ. ಭೂಮಿಯಿಂದ ಆಕಾಶದ ವರೆಗೆ ಎಂದು ಹೇಳಿದಷ್ಟು ಸಂಕ್ಷೇಪ ಅದು. ಅಮೀಬಾ ಚಿಪ್ಪಿನ ಹುಳುವಾಗಿ ಮಾರ್ಪಡಬೇಕಾಗಿ ದ್ದರೆ ಅದೆಷ್ಟೋ ಅವತಾರವೆತ್ತಬೇಕಾಯಿತು; ಅದೆಷ್ಟೋ ಯುಗ ಕಳೆಯ ಬೇಕಾಯಿತು. ಹಾಗೆಯೇ ಒಂದು ಅಂತಸ್ತಿನಿಂದ ಮತ್ತೊಂದು ಅಂತಸ್ತಿಗೆ.

ಇಲ್ಲಿಯ ವರೆಗೂ ನಾವು ಚರ್ಚಿಸಿದ ಪ್ರಕೃತಿಯ ವಿವಿಧ ಸಂಶೋ ಧನೆಗಳು ಸ್ಥಳದಿಂದ ಸ್ಥಳಕ್ಕೊಯ್ಯುವ ಹಾಗೂ ಚಲನೆಯನ್ನು ತಡೆ ಗಟ್ಟುವ ಅಂಗಗಳು, ನಾಳಗಳಿಂದ ಕೂಡಿದ ಹೃದಯ, ನರಗಳೊಡ ಗೂಡಿದ ಮಿದುಳು, ಲಿಂಗ ಭೇದ ಇವೆಲ್ಲವೂ ಕತ್ತಲೆಯಿಂದ ಕೂಡಿದ ಆಳವಾದ ಸಮುದ್ರ ಗರ್ಭದಲ್ಲಿ ಭೂಮಿಯ ಜೀವಮಾನದ ಸಾಗರ ಪ್ರಧಾನ ಕಾಲದಲ್ಲಿ ನಡೆದವು.





ನೆಲದಮೇಲೆ

ಇನ್ನೂ ಭೂಮಿಯ ನೆಲದ ಮೇಲೆ ಯಾವ ಬಗೆಯ ಸಸ್ಯವಾಗಲಿ ಪ್ರಾಣಿಯಾಗಲಿ ಇರಲಿಲ್ಲ. ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಕಲ್ಲಾಗಿದ್ದ ನೆಲ ಇಲ್ಲವೆ ತೆರೆ ತೆರೆಯಾಗಿ ದಡಕ್ಕೆ ಅಪ್ಪಳಿಸುತ್ತಿದ್ದ ನೀರು. ಹೀಗೆ ಬಹುಕಾಲ ಕಳೆಯಿತು.

ಅಪಾರಕಾಲ ಕಳೆದಂತೆ ನೆಲ ಮೊದಲಿನಂತೆಯೇ ಉಳಿಯಲಿಲ್ಲ; ಕಾವು ಅಡಗಿ ತಂಪಾಯಿತು. ಜೊತೆಗೆ ಮಳೆಸುರಿದು ಬಿಸಿಲುಕಾದು, ಕಲ್ಲು ಸಿಡಿದು ಸವೆದು ಮಣ್ಣಾಗಿ ನೆಲದ ಮೇಲೆ ಹರಡಿ ಹೋಯಿತು.

ಕೆಳ ದರ್ಜೆಯ ಸಸ್ಯಗಳು ಮೊದಲು ನೆಲದಲ್ಲಿ ಬೇರೂರಿದವು. ಆಕಾರ ಹೀನವಾದ ನೀರುಗಿಡದ ಪೊರೆಗಳು ನೀರಿನಲ್ಲಿ ತೇಲಿ ಬಂದು ದಡದ ಕೆಸರಿನಲ್ಲಿ ಜೊಂಡುಗಳೋ ಅಥವಾ ಜಲಭರಿತ ಸಸ್ಯಗಳೋ ಆಗಿ ಹುಟ್ಟಿಕೊಂಡವು. ಕ್ರಮೇಣ ಅವು ಒಣ ನೆಲದ ಮೇಲೆಯೂ ಆಶ್ರಯ ಸಂಪಾದಿಸಿಕೊಂಡವು.

ಆಶ್ಚರ್ಯ! ಇನ್ನೂ ಫಲ ಬೀಜಗಳು ಹುಟ್ಟದಿದ್ದರೂ ಮರದ ತೊಗಟೆಯ ಪೊರೆ ಉದುರಿ ಅದೇ ಪುನರ್ನಿರ್ಮಾಣಕ್ಕೆ ಕಾರಣವಾಗಿದ್ದರೂ ನೆಲದ ಮೇಲಣ ಸಸ್ಯಗಳು ನೀರಿನ ಸಸ್ಯಗಳಂತೆ ಪೀಚಾಗುಳಿಯಲಿಲ್ಲ. ಸೂರ್ಯರಶ್ಮಿಯ ಪ್ರಭಾವದಿಂದ ವಾತಾವರಣದಲ್ಲಿ ತುಂಬಿದ್ದ ಇಂಗಾಲಾಮ್ಲದ ಹೊರವಿನಿಂದ ಬಗೆಬಗೆಯ ಗಿಡ ಮರ ಬಳ್ಳಿಗಳು ಅಗಾಧವಾಗಿ, ಭಯಂಕರ ವಾಗಿ ಬೆಳೆದವು. ಒಂದೊಂದು ಮರದ ಸುತ್ತಳತೆ ೩೦ನಾರು ; ಎತ್ತರವೋ ೧೫೦ ಅಡಿ. ಬಳ್ಳಿಗಳೋ ನೂರಾರು ಅಡಿ ಉದ್ದ. ಭೂಗುಣ ಅನುಕೂಲ

ವಾಗಿದ್ದ ಕಡೆಗಳಲ್ಲೆಲ್ಲಾ ಸೂರ್ಯ ರಶ್ಮಿ ನೆಲಕ್ಕೆ ಸೋಕದಂತಹ ದಟ್ಟವಾದ ಕಾಡು. ಅನಿಲದಲ್ಲಿರುವ ಆ ಅಪಾಯಕರವಾದ ಇಂಗಾಲಾಮ್ಲ ಸಸ್ಯ ವರ್ಗಕ್ಕೆ ಆಹಾರವಾಗಿ ಪರಿಣಮಿಸಿತು. ಇಂಗಾಲಾಮ್ಲವನ್ನು ಸಸ್ಯಗಳು ಹೀರಿದಂತೆ ವಾತಾವರಣ ಪರಿಶುದ್ಧವಾಯಿತು. ಅಷ್ಟು ಇಂಗಾಲಾಮ್ಲ



ಕಲ್ಲಿದ್ದಲ ಗಣಿಗಳಿಗೆ ಕಾರಣವಾಗಿದ್ದ ಕಾಡು ಭಾಗ

ವನ್ನೂ ಹೀರಿ ಹೊರವಾಗಿ ಆ ಕಾಡುಗಳೇ ಕಾಲಕ್ರಮದಲ್ಲಿ ಭೂಮಿಯಲ್ಲಿ ಹೂತು ಹೋಗಿ ಪರಿವರ್ತನೆಗೊಂಡು ಈಗಿನ ಕಲ್ಲಿದ್ದಲು ಗಣಿಗಳಾಗಿವೆ.

ವಾತಾವರಣದಲ್ಲಿ ತುಂಬಿದ್ದ ಇಂಗಾಲಾಮ್ಲದ ಭಾಗವು ಈರೀತಿ ಉಪಯೋಗವಾದಮೇಲೆ ಗಾಳಿ ತಿಳಿಯಾಯಿತು. ಸೂರ್ಯನ ಕಿರಣವು ಇನ್ನೂ ಪ್ರಕಾಶಮಾನವಾಗಿ ಭೂಮಿಗೆ ತಾಗಿತು. ಆಗ ಪ್ರಾಣಿಗಳ ಬದುಕಿಗೆ ನೆಲ ಅನುಕೂಲವಾಯಿತು.

ಸಸ್ಯವರ್ಗ ಭಯಂಕರವಾಗಿ ಅಸಂಖ್ಯಾತವಾಗಿ ಬೆಳೆದಿದ್ದರೂ ಅವುಗಳಲ್ಲಿ ರಮ್ಯತೆ ಇರಲಿಲ್ಲ, ಸಲ್ಲಕ್ಷಣತೆ ಇರಲಿಲ್ಲ. ಅವುಗಳಲ್ಲಿ ಪ್ರೇಮ ವಾಸನೆ ಇಲ್ಲದಿದ್ದುದೇ ಆ ಸ್ಥಿತಿಗೆ ಕಾರಣ.

ಈ ನೆಲದ ಗಿಡಗಳಲ್ಲಾದರೂ ಲಿಂಗ ಭೇದವುಂಟಾಗಿ ಪ್ರೇಮದ ಕುರುಹಾದ ಹೂಗಳು ಕಾಣಿಸಿಕೊಳ್ಳ ಬೇಕಾಗಿದ್ದರೆ ಇನ್ನೂ ಅಸಂಖ್ಯ ಶತಮಾನಗಳು ಕಳೆಯಬೇಕಾಗಿತ್ತು.

## ನೀರು-ನೆಲ ಪ್ರಾಣಿ

ನೀರಿನಲ್ಲಿ ಜೀವಕೋಟಿ ಬೆಳೆಯಿತು. ಸಮುದ್ರಗಳಲ್ಲೆಲ್ಲಾ ಪ್ರಾಣಿಗಳು ತುಂಬಿದ್ದವು. ಅದು ಮೀನಿನ ಯುಗ. ಸರೋವರ, ಸಮುದ್ರ, ಸಾಗರಗಳಲ್ಲಿ ಸೂಜಿಯ ಗಾತ್ರಕ್ಕೂ ಸಣ್ಣದಾದ ಮೀನಿನಿಂದ ಹಿಡಿದು ಬೇಕಾದರೆ ಆನೆ ಕುದುರೆಗಳನ್ನೇ ನುಂಗಿ ನೀರು ಕುಡಿಯುವಂತಹ ಅದ್ಭುತ ಗಾತ್ರದ ಮೀನುಗಳ ವರೆಗೂ ಇದ್ದವು. ದೊಡ್ಡ ಮೀನುಗಳು ಚಿಕ್ಕ ಮೀನುಗಳನ್ನು ತಿಂದು ತೇಗುತ್ತಿದ್ದುವು. ಸಾಗರಸಾಮ್ರಾಜ್ಯದಲ್ಲಿ ಎಲ್ಲೆಲ್ಲಿಯೂ ಈ ಮೀನುಗಳ ಅವಾಂತರವೇ ಅವಾಂತರ. ಇಷ್ಟಾದರೂ ನೆಲದಲ್ಲಿ ಇನ್ನೂ ಪ್ರಾಣಿ ಕಾಣಿಸಿಕೊಂಡಿರಲಿಲ್ಲ. ಈ ಹೊತ್ತಿಗೆ



ಸಾಗರ ಸಾಮ್ರಾಜ್ಯದಲ್ಲಿ ಬೆಳೆದಿದ್ದ ಪ್ರಾಣಿವರ್ಗ

ನೆಲದ ಮೇಲೂ ಜಂತುಗಳನ್ನು ಕಾಣುವ ಕಾಲ ಬಂತು. ಈಗ ನೀರಿನಲ್ಲಿ ವಾಸಿಸುವ ಪ್ರಾಣಿಗಳಿಗೂ ನೆಲದ ಮೇಲೆ ವಾಸಿಸುವ ಪ್ರಾಣಿಗೇಗೂ ಇರುವ ವ್ಯತ್ಯಾಸವನ್ನು ಸ್ವಲ್ಪಮಟ್ಟಿಗೆ ತಿಳಿಯಲು ಪ್ರಯತ್ನಿಸೋಣ.

ಪ್ರಾಣಿಗಳು ಬದುಕ ಬೇಕಾದರೆ ಉಸಿರಾಡಬೇಕು. ಉಸಿರಾಡುವುದು ಜೀವನಕ್ಕೆ ಆಧಾರವಾಗಿರುವ ದೇಹದ ರಕ್ಷಣೆಗಾಗಿ. ಪ್ರಾಣಿಗಳ ದೇಹದೊಳಗೆ ಪ್ರತಿ ಕ್ಷಣವೂ ಕೊಳೆಗೂಡುತ್ತದೆ. ಆ ಕೊಳೆಯನ್ನು ಹೊರಕೆ ತಳ್ಳಿ ದೇಹವನ್ನು ಶುಚಿಯನಾಗಿಡದಿದ್ದರೆ ದೇಹ ಕೆಡುತ್ತದೆ. ಅದೇ ರೋಗಕ್ಕೆ ಕಾರಣ. ದೇಹದ ಒಳಗಡೆ ಕೂಡಿಕೊಂಡ ಕೊಳಕನ್ನು ಹೊರಗೆ ತರಲು ದೇಹದಲ್ಲಿ ಶುದ್ಧಿ ಮಾಡುವ ಅಂಗಗಳಿವೆ. ಉಸಿರಾಟದ ಅಂಗ ಅವುಗಳಲ್ಲಿ ಮುಖ್ಯವಾದುದು. ಉಸಿರಾಡಲು ಆಧಾರವಾಗಿರುವ ಅಂಗಗಳಿಗೆ ಶ್ವಾಸಾಂಗಗಳು ಎಂದು ಹೆಸರು. ಈ ಶ್ವಾಸಾಂಗಗಳು ತಮ್ಮ ಕೆಲಸ ಮಾಡುವುದನ್ನು ನಿಲ್ಲಿಸಿದ ಕೂಡಲೇ ಪ್ರಾಣ ಹೋಗುವುದು. ಈ ಅಂಗಗಳಲ್ಲಿ ಆದ ಬದಲಾವಣೆಯಿಂದಲೇ ನೀರಿನ ಪ್ರಾಣಿಗಳು. ನೆಲದ ಮೇಲೂ ಜೀವಿಸುವಂತಾದುದು.

ನೆಲದ ಮೇಲೆ ಜೀವಿಸುವ ಪ್ರಾಣಿಗಳಿಗೆ ಉಸಿರಾಡಲು ಶ್ವಾಸಕೋಶವಿದೆ. ನೀರಿನಲ್ಲಿರುವ ಪ್ರಾಣಿಗಳಿಗೆ ಹಾಗಿಲ್ಲ. ಉದಾಹರಣೆಗೆ ಮೀನನ್ನು ತೆಗೆದು ಕೊಳ್ಳೋಣ. ಇದಕ್ಕೆ ಶ್ವಾಸಕೋಶವಿಲ್ಲ. ಅದರಿಂದಲೇ ಮೀನನ್ನು ನೀರಿನಿಂದ ಹೊರಗೆ ತೆಗೆದರೆ ಉಸಿರಾಟ ನಿಂತು ಸಾಯುವುದು. ಆದರೆ ಶ್ವಾಸಕೋಶದ ಬದಲು ಕತ್ತಿನ ಎರಡು ಪಕ್ಕದಲ್ಲೂ ಕಿವಿರು ಇರುತ್ತದೆ.




ಅ-ಮೀನಿನ ಕತ್ತಿನ ಪಕ್ಕದಲ್ಲಿರುವ ಕಿವುರು; ಮೇಲಿರುವ ಪೊರೆಯನ್ನು ತೆಗೆದು ತೋರಿಸಿದೆ

**ಕಿವುರು-ಶ್ವಾಸಕೋಶ**

ನೀರಿನಲ್ಲಿ ಬೆರೆತ ಗಾಳಿಯನ್ನು ಈ ಕಿವುರು ತೆಗೆದು ಕೊಳ್ಳುತ್ತದೆ. ಅಲ್ಲಿಗೆ ಬಂದ ರಕ್ತ ಆ ಗಾಳಿಯಲ್ಲಿರುವ ಆಮ್ಲಜನಕವನ್ನು ಪಡೆದು ಶುದ್ಧಿಯಾಗುತ್ತದೆ. ಅನಂತರ ಅದು ಅಲ್ಲಿಂದ ದೇಹದಲ್ಲೆಲ್ಲಾ ಹರಡುತ್ತದೆ. ದೇಹದ ಅಂಗಗಳಿಗೆ ಶಕ್ತಿ ಕೊಡುತ್ತದೆ. ದೇಹದಲ್ಲಿರುವ ಕಶ್ಮಲವನ್ನು ಹೊತ್ತು ಮತ್ತೆ ಕಿವುರಿಗೆ ಬಂದು ಶುದ್ಧಿಯಾಗುತ್ತದೆ. ಯಾವ ಪ್ರಾಣಿಗೇ ಆಗಲಿ ಗಾಳಿಯ ಉಪಯೋಗವಾಗಬೇಕಾದರೆ ಅದು ಮೊದಲು ನೀರಿನಲ್ಲಿ ಬೆರೆಯಬೇಕು. ಮನುಷ್ಯ ಉಸಿರು ತೆಗೆದು ಕೊಂಡಾಗ ಗಾಳಿ ಶ್ವಾಸಕೋಶದ ಒದ್ದೆಯಲ್ಲಿ ಬೆರೆಯುತ್ತದೆ. ಆಗ ರಕ್ತ ಆ ಗಾಳಿಯಲ್ಲಿರುವ ಆಮ್ಲಜನಕವನ್ನು ಪಡೆಯಲು ಸಾಧ್ಯ.

ಸಮುದ್ರ ಸಾಗರಗಳನ್ನು ಬಿಟ್ಟರೆ ಒಮ್ಮೊಮ್ಮೆ ಕುಂಟೆ ಸರೋವರಗಳಲ್ಲಿ ನೀರು ಬತ್ತಿ ಹೋಗುತ್ತಿತ್ತು. ಈ ಬದಲಾವಣೆಗೆ ಸಿಕ್ಕಿದ ನೀರು ಪ್ರಾಣಿ ಈ ಹೊಸ ಆವರಣವನ್ನು ಎದುರಿಸಿ ಬದುಕ ಬೇಕಾಗಿ ಬಂತು. ಅದಕ್ಕೆ ಅನುಕೂಲವಾಗಿ ಕಿವುರಿನ ಜೊತೆಗೆ ಶ್ವಾಸಕೋಶವೂ ಕೆಲವು ಮೀನುಗಳಲ್ಲಿ ಉಂಟಾಯಿತು. ಈ ಎರಡೂ ಇದ್ದ ಪ್ರಾಣಿ ನೀರು ಬತ್ತಿದಾಗ ಮಳೆ ಬಿದ್ದು ನೀರು ತುಂಬುವವರೆಗೆ ಬದಿಯಲ್ಲಿದ್ದು ಉಸಿರಾಡಿ ಬದುಕಿರುತ್ತಿತ್ತು. ಬದಿಯೂ ಇಲ್ಲದ ಒಣನೆಲದ ಆವರಣಕ್ಕೇ ಹೊಂದಿಕೊಳ್ಳುವಂತೆ ಅನುಕೂಲವಾಗಿ ಕೆಲವು ಪ್ರಾಣಿಗಳ ಪೀಳಿಗೆಯಲ್ಲಿ ಕ್ರಮೇಣ ಕಿವುರು ಮಾಯವಾಗಿ ಶ್ವಾಸಕೋಶ ಹುಟ್ಟಿಕೊಂಡಿತು. ಇದನ್ನು ನಾವು ಕಪ್ಪೆಯ ಜೀವನದ ಉದಾಹರಣೆಯಿಂದ ಮನದಟ್ಟು ಮಾಡಿಕೊಳ್ಳಬಹುದು.

**ಕಪ್ಪೆ**

ಕಪ್ಪೆ ನೀರಿನಲ್ಲಿ ಮೊಟ್ಟೆ ಇಡುತ್ತದೆ. ಆ ಮೊಟ್ಟೆ ಅಲ್ಲೆ ಒಡೆದು ಮರಿಯಾಗುತ್ತದೆ. ಈ ಮರಿಗೆ ಮೀನಿಗಿರುವಂತೆಯೇ ನೀರಿನಲ್ಲಿ ಬೆರೆತ

ಗಾಳಿಯನ್ನು ಹೀರಲು ಅನುಕೂಲವಾಗಿ ಕಿವುರು ಇರುತ್ತದೆ. ಆ ಕಪ್ಪೆ ಮರಿಗೂ ಮೀನಿಗೂ ವ್ಯತ್ಯಾಸ ಕಾಣುವುದಿಲ್ಲ. ಆ ಮರಿ ಬೆಳೆದಂತೆ ಮೊದಲು ಹಿಂದಿನ ಎರಡು ಕಾಲುಗಳು ಬೆಳೆಯುತ್ತವೆ. ಆಮೇಲೆ ಮುಂಗಾಲುಗಳೆರಡು ಕಾಣಿಸಿಕೊಳ್ಳುತ್ತವೆ. ಆಗ ಬಾಲವುಳ್ಳ ಕಪ್ಪೆ ಯಾಗುತ್ತದೆ. ಕ್ರಮೇಣ ಕತ್ತಿನ ಪಕ್ಕದಲ್ಲಿದ್ದ ಕಿವುರು ಮಾಯವಾಗಿ ಎದೆಯಲ್ಲಿ ಶ್ವಾಸಕೋಶ ಬೆಳೆಯುತ್ತದೆ. ಬಾಲವು ಸವೆಯುತ್ತ ಬಂದು ಕೊನೆಗೆ ಅದೂ ಮಾಯವಾಗುತ್ತದೆ. ಆಗ ಅದು ಸರಿಯಾದ ಕಪ್ಪೆ.




1. ಕಪ್ಪೆ ನೀರಿನಲ್ಲಿಡುವ ಮೊಟ್ಟೆ, 2. ಮೊಟ್ಟೆಯೊಳಗೆ ಮರಿ ಆಗುವರೀತಿ, 3. ಮೊಟ್ಟೆಯೊಡದು ಹೊರಗೆಬಂದ ಮರಿ, 4. ಸ್ವಲ್ಪ ದೊಡ್ಡದಾದ ಕಪ್ಪೆ ಮರಿ, 5. ಹಿಂದಿನ ಎರಡು ಕಾಲುಗಳು ಹುಟ್ಟಿಕೊಂಡಿರುವ ದೊಡ್ಡ ಮರಿ, 6 ನಾಲ್ಕು ಕಾಲುಗಳು ಹುಟ್ಟಿಕೊಂಡಿರುವ ದೊಡ್ಡ ಮರಿ, 7 ಬಾಲ ಸವೆಯುತ್ತ ಬಂದಿರುವ ಕಪ್ಪೆ, 8 ಸರಿಯಾದ ಕಪ್ಪೆ.

ಈ ಕಪ್ಪೆಗೆ ನೆಲದ ಮೇಲೂ ಜೀವಿಸುವ ಶಕ್ತಿ ಬರುತ್ತದೆ. ಆಮೇಲೆ ಕಪ್ಪೆ ಜಲ ನೆಲ ಎರಡರಲ್ಲೂ ಜೀವಿಸುವ ಪ್ರಾಣಿಯಾಗುತ್ತದೆ. ಆದರೆ ಕಪ್ಪೆ ನೀರಿನಲ್ಲಿದ್ದರೂ ಕೂಡ ಉಸಿರಾಡಲು ನೀರಿನ ಮೇಲೇ ಬರಬೇಕು. ಕಾರಣ, ಕಿವುರಿಲ್ಲದೆ ಶ್ವಾಸಕೋಶ ಮಾತ್ರ ಇರುವುದು.

ಕಪ್ಪೆಯಂತೆಯೇ ಹಲವು ನೀರು ಪ್ರಾಣಿಗಳಲ್ಲಿಯೂ ಬದಲಾವಣೆ ಯಾಗಿ ನೆಲದ ಮೇಲೆಬದುಕುವಂತಾದವು. ನೆಲವಿನ್ನೂ ಕೊಚ್ಚೆಯಾಗಿತ್ತು.

ಎಲ್ಲೆಲ್ಲೂ ಜವುಗು. ಆ ನೆಲಕ್ಕೆ ಹೊಂದಿಕೊಂಡು ಬಾಳಬಹುದಾದ ಪ್ರಾಣಿಗಳ ಸುಳಿವು ಮೊದಲಾಯಿತು. ಇವುಗಳಲ್ಲಿ ಭಯಂಕರ ಗಾತ್ರದನೊಣಗಳು, ಹಾರುವ ಚೇಳುಗಳು, ಮೊಸಳೆಗಳು ಮುಖ್ಯವಾದವು. ಆಮೇಲೆ ಹಾವಿನ, ಜಾತಿಗೆ ಸೇರಿದ ಪ್ರಾಣಿಗಳು ಇಣಕಿದವು. ಆದರಿನ್ನೂ ಈ ಪ್ರಾಣಿಗಳ ತವರು ನೀರೇ ಆಗಿತ್ತು.

## ನೆಲದಪ್ರಾಣಿ

ಹಾವುಗಳು ನೆಲದ ಮೇಲೆ ಕಾಣಿಸಿ ಕೊಂಡವೋ ಇಲ್ಲವೊ ಅವುಗಳ ಬಳಗ ಆಶ್ಚರ್ಯಕರವಾದ ರೀತಿಯಲ್ಲಿ ಹುಚ್ಚಾಬಟ್ಟೆ ಬೆಳೆಯಿತು. ಚಿತ್ರವಿಚಿತ್ರ ಜಾತಿಗಳು ಜನ್ಮವೆತ್ತಿದವು. ಆಗ ಆ ನಿರ್ಜನವಾದಕಾಡಿನಲ್ಲಿ ನಿಂತುಕೊಂಡರೆ ಕಾಣುತ್ತಿದ್ದುದೇನು ? ಅಲುಗದೆ ಬಂಡೆಯಂತೆ ಬಿದ್ದಿರುವ ಇಲ್ಲವೆ ಉರುಳಾಡುವ ಮೊಸಳೆ ವರ್ಗ. ಡೊಂಕುಡೊಂಕಾಗಿ ಬಳಸಿ ಹರಿದಾಡುತ್ತಿದ್ದ ಮಾರುಗಟ್ಟಲೆ ಉದ್ದದ ಹಾವುಗಳು, ರೊಯ್ಯನೆ ಹಾರಿ ಬಂದು ಸಿಕ್ಕಿದುದಕ್ಕೆಲ್ಲ ತನ್ನ ಕೊಂಡಿಯನ್ನು ಚುಚ್ಚಲು ಹವಣಿಸುವ ಆ ಪಿಶಾಚಿ ನೊಣ, ಚೇಳುಗಳು. ಜೊತೆಗೆ ಆ ಗಗನವನ್ನು ಮುಟ್ಟುವ ಮರಗಿಡಗಳ ಕಟಕಟ ಕಳಕಳ ಘೀಂಕಾರಶಬ್ದ. ಎಲ್ಲವೂ ಭಯಂಕರ.

ಕಾಲಚಕ್ರ ನಿಧಾನವಾಗಿ ಬಹುಭಾಗ ಉರುಳಿತು. ಮರಗಿಡಗಳನ್ನು ಹೂಗಳು ಅಲಂಕರಿಸಿದವು. ಅವುಗಳ ಮೌನದ ರಾಗ ಭೂಮಿಯನ್ನು ರಮಿಸಿತು. ಅವುಗಳ ಸೌರಭವನ್ನು ಹೊತ್ತ ಗಾಳಿ ಆಕಾಶದಲ್ಲಿ ನಾಟ್ಯವಾಡಿತು. ದುಂಬಿಗಳು ತಾಳಮೇಳವಿಟ್ಟು ಅವುಗಳಲ್ಲಿ ಸಂಪರ್ಕವನ್ನುಂಟು ಮಾಡಿದವು.

ಹೀಗೆಯೇ ಯುಗ ಯುಗಗಳು ಕಳೆದವು. ಪ್ರಾಣಿಗಳ ಸ್ವರೂಪದಲ್ಲಿ ಗಾಂಭೀರ್ಯ ಪ್ರಾರಂಭವಾಯಿತು. ಆದರೂ ರಂಗದ ಮೇಲೆ ಈ ಭೂಗ್ರಹದ ನಾಯಕನಾದ ಮಾನವ ಕಾಣಿಸಿಕೊಳ್ಳಬೇಕಾದರೆ ಇನ್ನೂ ಕೋಟಿ ಕೋಟ್ಯಂತರ ಶತಮಾನಗಳು ಕಳೆಯ ಬೇಕಾಗಿತ್ತು.

## ಉರಗಯುಗ

ಮಾನವೋದಯದವರೆಗೆ ನಡೆದ ವಿಚಾರ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸೋಣ. ಕ್ರಮೇಣ ಕಾಲ ಬದಲಾಯಿಸಿತು. ವಾಯುಗುಣ ಪ್ರಾಣಿಗಳ ಬೆಳವಣಿಗೆಗೆ ಇನ್ನೂ ಅನುಕೂಲವಾಗಿ ಪರಿಣಮಿಸಿತು. ಆಗ ಹಾವು



ಮೊಸಳೆ ಜಾತಿಯ ಪ್ರಾಣಿಗಳಲ್ಲಿ ಪರಿವರ್ತನವಾಗಿ ನಾನಾ ಬಗೆಯ ಪ್ರಾಣಿಗಳು ಹುಟ್ಟಿದವು. ಈ ಪ್ರಾಣಿಗಳನ್ನು ಉರಗಗಳೆಂದು ಕರೆಯುತ್ತಾರೆ.



ಅವುಗಳ ಅಭಿವೃದ್ಧಿ ಕಾಲಕ್ಕೆ ಉರಗಯುಗವೆನ್ನುತ್ತಾರೆ. ಆ ಕಾಲದಲ್ಲಿ ಪ್ರಾಣಿಗಳು ಅಪಾರವಾಗಿದ್ದುದಷ್ಟೇ ಅಲ್ಲ. ಚಿತ್ರ ವಿಚಿತ್ರವಾಗಿಯೂ ಇದ್ದವು. ಕೆಲವು ಮೊಸಳೆಯನ್ನು ಹೋಲುತ್ತಿದ್ದವು. ಕೆಲವುಗಳ ಮೈ



ಉರಗ ಯುಗದ ಅಭಿವೃದ್ಧಿಕಾಲದ ಪ್ರಾಣಿಗಳು

ಮೇಲೆ ಆಮೆಯಂತೆ ಚಿಪ್ಪು ಬೆಳೆದಿತ್ತು. ಕೆಲವು ಪ್ರಾಣಿಗಳಿಗೆ ಮೂಗಿನಿಂದ ಬಾಲದ ತುದಿಯ ವರೆಗೂ ಬೆನ್ನ ಮೇಲೆ ಗರಗಸದಂತೆ ಗಟ್ಟಿ ಚಿಪ್ಪಿನ ಮುಳ್ಳು ಬೆಳದಿತ್ತು. ಇನ್ನೂ ಏನೇನೋ ಬಗೆ.



ಡಿನೊಸಾರ್ ಪೆಡಂಭೂತ

ಹೀಗೆ ಬೆಳೆದ ಪ್ರಾಣಿಗಳು ತಮ್ಮ ಆವರಣಕ್ಕೆ ತಕ್ಕ ರೀತಿಯಲ್ಲಿ ಜೀವಿಸ ತೊಡಗಿದವು. ಕೆಲವು ಮಾಂಸಾಹಾರಿಗಳಾದವು. ಮಾಂಸಾಹಾರಿಗಳಾದ ಪ್ರಾಣಿಗಳು ಮೊದ ಮೊದಲು ಸಣ್ಣ ಸಣ್ಣ ಪ್ರಾಣಿಗಳನ್ನು ಹಿಡಿದು, ಮುಂಗಾಲುಗಳಿಂದ ಅವುಗಳನ್ನು ಬಗೆದು, ತುಂಡು ತುಂಡು ಮಾಡಿ ಕಬಳಿಸಿ ಬಿಡುತ್ತಿದ್ದವು. ಕ್ರಮೇಣ ಆ ಜಾತಿಯ ಪ್ರಾಣಿಗಳ ಬಾಯಲ್ಲಿ ಅನುಕೂಲವಾಗಿ ಹಲ್ಲುಗಳು ಹುಟ್ಟಿದವು. ಪ್ರಾಣಿಗಳ ಅನುಕೂಲಕ್ಕೆ ತಕ್ಕಂತೆ ಅಂಗಗಳು ಮಾರ್ಪಟ್ಟವು. ಎತ್ತರವಾದ ಮರಗಳ ಎಲೆಗಳನ್ನು ತರಿದು ತಿನ್ನಲನುಕೂಲವಾಗಿ ಕೆಲವು ಪ್ರಾಣಿಗಳ ಕತ್ತು ಉದ್ದವಾಗಿ ಬೆಳೆಯಿತು.

ಹೀಗೆ ಹಲ್ಲಿಯ ಗಾತ್ರದಿಂದ ನಾಲ್ಕಾನೆ ಗಾತ್ರದ ವರೆಗೆ ಬೆಳೆದಿದ್ದ ಬಗೆಬಗೆಯ ಪ್ರಾಣಿಗಳಲ್ಲಿ ಡಿನೋಸರ್ ಎಂಬ ಜಾತಿಗೆ ಸೇರಿದ ಉರಗಗಳು ಎಲ್ಲಕ್ಕಿಂತಲೂ ದೊಡ್ಡವಾಗಿದ್ದವು. ಅವುಗಳ ಒಂದೊಂದರ ಉದ್ದ



ಡಿನೊಸಾರ್ ಜಾತಿಗೆ ಸೇರಿದ ಬ್ರಾಂಟೊ ಸಾರಸ್ ಎಂಬ ಪೆಡಂಭೂತ

ಬಾಲದಿಂದ ತಲೆಯ ವರೆಗೆ ಸುಮಾರು ನೂರು ಅಡಿ. ಗಾತ್ರ ಮತ್ತು ತೂಕವೋ ಈಗಿನ ನಾಲ್ಕಾನೆಗಳಷ್ಟು. ಆ ಪೆಡಂಭೂತಗಳು ಹೇಗಿದ್ದವೆಂಬು

ದನ್ನು ನಾವು ಊಹಿಸಿಕೊಳ್ಳ ಬಹುದು. ಈ ಅಪಾರ ಭಾರದ ಮೈಯನ್ನು ಅವುಗಳ ತುಂಡು ಕಾಲುಗಳು ಹೊರಲಾರದವುಗಳಾಗಿದ್ದವು. ಆದರಿಂದ ಆ ಪ್ರಾಣಿಗಳು ಕಡಲು, ಸರೋವರ, ನದಿಗಳನ್ನು ಸೇರಿದವು. ನೀರಿನಲ್ಲಾದರೆ ಆ ದೊಡ್ಡ ದೇಹವನ್ನು ತೇಲಿಸಿಕೊಂಡು ಸುಲಭವಾಗಿ ಓಡಾಡ ಬಹುದಾಗಿತ್ತು. ಹಾಗೆಯೇ ಕಾಲಕ್ರಮದಲ್ಲಿ ಮಾರ್ಪಾಡಾಗಿ ಈ ಪ್ರಾಣಿಗಳಲ್ಲಿ ಕೆಲವು ನೀರು ಪ್ರಾಣಿಗಳಾದವು. ಆ ಪ್ರಾಣಿಗಳ ಪೀಳಿಗೆಯೇ ಈಗ ಸಾಗರದ ಪ್ರಾಣಿಗಳಲ್ಲೆಲ್ಲಾ ದೊಡ್ಡದಾಗಿರುವ ತಿಮಿಂಗಿಲ.

## ವಿಷಮಕಾಲ

ಈ ಉರಗ ಯುಗದಕಾಲ ಸಾವಿರಾರು ಶತಮಾನಗಳು. ಆದರೆ ಒಂದೇ ಸಮ ಇರಲಿಲ್ಲ. ಯುಗದ ಕೊನೆಯಲ್ಲಿ ವಿಷಮ ಕಾಲ ಒದಗಿತು. ಸೂರ್ಯ ಮಂಡಲದಲ್ಲಿ ಏನೋ ಬದಲಾವಣೆ ಆಯಿತು. ಇದರಿಂದ ಭೂಮಿಯು ಹೆಚ್ಚು ಕಿವುಚಿದಂತಾಯಿತು. ತಳ ಕದಡಿ ಅಲ್ಲೋಲ ಕಲ್ಲೋಲವಾಯಿತು. ಭೂಮಿಯೊಳಗಡೆ ಏನೋ ಕುದಿಯುಂಟಾಗಿ ಬಂಡೆಗಳ ರಾಶಿ ಮರಳಿ ಕಾಡುಗಳನ್ನು ಮುಚ್ಚಿದವು. ಆಗ ಭೂಗರ್ಭದೊಳಗೆ ಮುಚ್ಚಿಹೋದ ಕಾಡುಗಳೇ ಈಗಿನ ಕಲ್ಲಿದ್ದಲು ಗಣಿಗಳು. ಹೀಗೆ ಭೂಮಿಯು ಅಲ್ಲೋಲ ಕಲ್ಲೋಲಗೊಂಡುದರಿಂದ ಸುಖಕರವಾದ ವಾತಾವರಣ ಬದಲಿಸಿ ಹೋಗಿ ಶೀತಯುಗ ಪ್ರಾರಂಭವಾಯಿತು. ಶೀತವೆಂದರೆ ಅಂತಿಂತಹ ಶೀತವಲ್ಲ. ನೀರೆಲ್ಲ ಗಡ್ಡೆ ಕಟ್ಟಿದುದಷ್ಟೇ ಅಲ್ಲ. ಭೂಮಿಯ ಮೇಲೆಲ್ಲ ಮಂಜು ಹೆಪ್ಪು ಕಟ್ಟಿ ನಿಂತಿತು. ಇದು ಪ್ರಾಣಿಗಳಿಗೆ ವಿಷಮಕಾಲವಾಗಿ ಪರಿಣಮಿಸಿತು.

ಈ ವಿಷಮ ಕಾಲಕ್ಕೆ ಅನುಸರಿಸಿ ಕೊಂಡು ಹೋಗಲು ಆ ಪ್ರಾಣಿಗಳಿಗೆ ಸಾಧ್ಯವಾಗಲಿಲ್ಲ. ಕಾಲಕ್ಕೆ ತಕ್ಕಂತೆ ತಮ್ಮ ಬಾಳನ್ನು ಹೊಂದಿಸಿ ಕೊಂಡು ಹೋಗಲು ಅವುಗಳಿಗೆ ಬುದ್ಧಿ ಶಕ್ತಿ ಇರಲಿಲ್ಲ ಡಿನೋಸಾರ್ ಪೆಡಂಭೂತದ ವಿಷಯ ಹಿಂದೆ ಹೇಳಿದೆ. ಅಷ್ಟು ದೊಡ್ಡ ಪ್ರಾಣಿಯ ಮೆದುಳು ನಿಂಬೆಕಾಯಿ ಗಾತ್ರ. ಇಷ್ಟು ಸಣ್ಣ ಮೆದುಳಿನ ಪೆಡಂಭೂತ

ಹೇಗೆತಾನೆ ವಿಷಮಸ್ಥಿತಿಯನ್ನು ಎದುರಿಸಿ ತನ್ನ ಹೆಮ್ಮೆಯನ್ನು ಕಾಪಾಡಿಕೊಂಡೀತು? ಬುದ್ಧಿ ಇಲ್ಲದ ಈ ಪ್ರಾಣಿಗಳು ಆಹಾರವಿಲ್ಲದೆ ಚಳಿಯನ್ನು ಸಹಿಸಿ ಬದುಕಲಾರದೆ ಹೋದವು. ಈ ಪ್ರಾಣಿಗಳ ನಾಶ ಉರಗ ಯುಗದ ಚರಮ ಗೀತೆಯನ್ನು ಹಾಡಿತು.



ವಿಷಮ ಕಾಲವನ್ನು ಎದುರಿಸಿ ಬಾಳಿದ ಉರಗವೊಂದರ ಪೀಳಿಗೆಯಲ್ಲಾದ ಮಾರ್ಪಾಡು

ಆದರೆ ಪ್ರಾಣಿ ವರ್ಗವೇ ಸಂಪೂರ್ಣ ನಿರ್ನಾಮವಾಗಲಿಲ್ಲ. ಹೇಗೋ ಹವಾಗುಣವನ್ನು ಅನುಸರಿಸಿ ಕೆಲವು ಬದುಕಿ ಕೊಂಡವು. ಬದುಕಿದ ಪ್ರಾಣಿಗಳ ಪೀಳಿಗೆಯಲ್ಲಿ ವಾತಾವರಣವನ್ನನುಸರಿಸಿ ಮಾರ್ಪಾಡುಂಟಾಯಿತು. ಛಳಿಯನ್ನು ತಡೆಯಲು ಶಕ್ಯವಾಗುವಂತೆ ಅವುಗಳ ಚರ್ಮ ಒರಟಾಯಿತು. ಕೆಲವು ಪ್ರಾಣಿಗಳ ಮೈತುಂಬ ಕೂದಲು. ಕೆಲವುಗಳ ಮೈಮೇಲೆ ಗರಿ ಬೆಳೆದು ಕೊಂಡಿತು. ಕೆಲವು ಪ್ರಾಣಿಗಳ ದೇಹವನ್ನು ಮುಚ್ಚಿ ಗಟ್ಟಿ ಚಿಪ್ಪು ಬೆಳೆಯಿತು. ಹೀಗೆ ಶಕ್ತಿಯುತವಾದ ಪ್ರಾಣಿಗಳು ಆ ವಿಷಮಕಾಲವನ್ನು ಎದುರಿಸಿ ತಮ್ಮ ಬಾಳನ್ನು ಸಾಗಿಸಿದವು.

## ಪಕ್ಷಿಗಳು

ಈ ಶೀತಯುಗವೂ ಒಮ್ಮೆ ಕೊನೆಗೊಂಡಿತು. ಮತ್ತೆ ಸುಖಕರವಾದ ವಾತಾವರಣಕ್ಕೆ ಪ್ರಾರಂಭವಾಯಿತು. ಈ ಸಂದಿಗ್ಧಕಾಲದಲ್ಲಿ ಪ್ರಾಣಿವರ್ಗದಲ್ಲಿ ಒಂದು ಹೊಸ ಕವಲು ಒಡೆಯಿತು. ಅದು ಪಕ್ಷಿವರ್ಗ. ಮುಂದೆ ಪ್ರಾಣಿವರ್ಗದಲ್ಲಿ ಪಕ್ಷಿಗಳು ಮತ್ತು ನೆಲದ ಪ್ರಾಣಿಗಳು ಹೀಗೆ ಎರಡುಬಗೆಯಲ್ಲೂ ವೃದ್ಧಿಯಾಯಿತು.

ಪಕ್ಷಿಗಳು ಹುಟ್ಟಿಕೊಂಡ ಸನ್ನಿವೇಶವನ್ನು ಕೊಂಚಮಟ್ಟಿಗೆ ತಿಳಿಯೋಣ. ಕೆಲವು ಪ್ರಾಣಿಗಳು ತಮ್ಮ ನಡಿಗೆಯಲ್ಲಿ ವೇಗ ಸಾಧಿಸಲು ಸತತ ಪ್ರಯತ್ನ ನಡೆಸಿದವು. ಆ ಸಾಧನೆಯನ್ನನುಸರಿಸಿ ಕಾಲಕ್ರಮದಲ್ಲಿ ಮುಂದಿನ ಪೀಳಿಗೆಗಳಲ್ಲಿ ಅನುಕೂಲವಾಗಿ ರೆಕ್ಕೆ ಪುಕ್ಕಗಳು ಹುಟ್ಟಿಕೊಂಡವು. ಮುಂಗಾಲುಗಳು ರೆಕ್ಕೆಗಳಾಗಿಯೂ, ಬಾಲವು ಪುಕ್ಕವಾಗಿಯೂ, ಮಾರ್ಪಾಡುಹೊಂದಿದವು. ಆಗ ಆ ಪ್ರಾಣಿಗಳು ರೆಕ್ಕೆಗಳನ್ನು ಬೀಸಿಕೊಂಡು ಓಡತೊಡಗಿದವು ಹಾಗೆಯೇ ಹಾರಾಟಕ್ಕೆ ಪ್ರಾರಂಭವಾಯಿತು. ಮೈ ಮೂಳೆ ಟೊಳ್ಳಾಯಿತು. ಮಿದುಳು ಚುರುಕಾಯಿತು ಹಲ್ಲುಳ್ಳಬಾಯಿ ಕೊಕ್ಕಾಯಿತು.



ತವ್ಮ ನಡಿಗೆಯಲ್ಲಿ ವೇಗವನ್ನು ಸಾಧಿಸಲು ಪ್ರಯತ್ನಿಸಿದ ಉರಗ ಒಂದರ ಪೀಳಿಗೆಯಲ್ಲಾದ ಮಾರ್ಪಾಡು

ಮರಗಳು ಇಷ್ಟರಲ್ಲಾಗಲೆ ಹೂವು ಹಣ್ಣುಗಳಿಂದ ತೊನೆಯು ತ್ತಿದ್ದವು. ಹಲವು ಪ್ರಾಣಿಗಳಿಗೆ ಕಾಯಿ ಹಣ್ಣುಗಳು ಆಹಾರವಾಯಿತು. ಹಣ್ಣು ಕಳಿತು ಮರದಿಂದ ಕಳಚಿಕೊಳ್ಳುವ ವರೆಗೆ ಕಾಯ್ದು ಕುಳಿತಿರ ಲಾರದ ಪ್ರಾಣಿಗಳು ಮರದ ಮೇಲೆಯೇ ಹೋಗಿ ಹಣ್ಣು ಕಬಳಿಸಲು ಆಸೆ ಪಟ್ಟವು. ಆ ಆಸೆಯನ್ನು ಸಾಧಿಸಲು ಪ್ರಯತ್ನವೂ ನಡೆಯಿತು.

ಹೀಗೆ ಆಸೆಯ ಸಾಧನೆಯ ಹೋರಾಟದಲ್ಲಿದ್ದ ಪ್ರಾಣಿಗಳ ಪೀಳಿಗೆ ಯಲ್ಲಿ ಮರಹತ್ತಲು ಅನುಕೂಲವಾದ ಅಂಗಗಳು ಬೆಳೆದವು.




ಮರಹತ್ತಲು ಕಲಿತು ಅಲ್ಲಿಂದ ಹಾರಲು ಪ್ರಯತ್ನಿಸಿದ ಪ್ರಾಣಿಗಳು—ಪಕ್ಷಿಸಂಕುಲದ ಮೂಲ ಪ್ರಾಣಿಗಳು.

ಮರಹತ್ತಿದ ಪ್ರಾಣಿಗಳು ಅಲ್ಲಿಂದ ಹಾರಲು ಪ್ರಯತ್ನಿಸಿದವು. ಕ್ರಮೇಣ ಮುಂದಿನ ಪೀಳಿಗೆಯಲ್ಲಿ ಹಾರಲು ಅನುಕೂಲವಾದ ರೆಕ್ಕೆ ಪುಕ್ಕಗಳು ಬೆಳೆದವು.

ಹೀಗೆ ನಾನಾ ರೀತಿಯಲ್ಲಿ ಪಕ್ಷಿಗಳ ಹುಟ್ಟಿಗೆ ಕಾರಣವಾಯಿತು. ಮುಂದೆ ಪಕ್ಷಿಸಂಕುಲ ವೃದ್ಧಿಯಾಯಿತು.

## ಮೊಟ್ಟೆ—ಮರಿ

ಪ್ರಾಣಿಗಳಲ್ಲಿ ಗಂಡು ಹೆಣ್ಣು ಭೇದ ಉಂಟಾದಮೇಲೆ ಗಂಡು ಹೆಣ್ಣು ಕೂಡಿ ಹೆಣ್ಣು ಗರ್ಭತಾಳಿ ಮೊಟ್ಟೆಯಿಡುತ್ತಿತ್ತು. ಆ ಮೊಟ್ಟೆ ಶಾಖಕ್ಕೆ ಒಡೆದು ಮರಿ ಹೊರಬಿದ್ದು ಸಂತತಿ ಬೆಳೆಯುತ್ತಿತ್ತು. ಈ ರೀತಿಯೇ ಬಹಳ ಕಾಲ ನಡೆಯಿತು. ಮೀನು ನೀರಿನಲ್ಲಿ ಬೇಕಾದಷ್ಟು ಮೊಟ್ಟೆಯೂರಿ ಅವುಗಳ ಲಕ್ಷ್ಯ ತೆಗೆದುಕೊಳ್ಳದೆ ತನ್ನ ಪಾಡಿಗೆ ತಾನು ಹೋಗುವುದು. ಅಂತೆಯೇ ಮೊದ ಮೊದಲು ಪ್ರಾಣಿಗಳಿಗೆ ತಮ್ಮ ಮೊಟ್ಟೆಯಲ್ಲಾಗಲೀ, ಸಂತತಿಯಲ್ಲಾಗಲೀ ಅಭಿಮಾನವಿರಲಿಲ್ಲ. ಈ ನಿರ್ಲಕ್ಷ್ಯದಿಂದ ಮೊಟ್ಟೆಗಳೆಲ್ಲ ಒಡೆದು ಮರಿಯಾಗುತ್ತಲೂ ಇರಲಿಲ್ಲ. ನಾನಾಕಾರಣಗಳ ಹಾವಳಿಯಿಂದ ಬಹುಮಟ್ಟಿಗೆ ಹಾಳಾಗಿ ಹೊಗುತ್ತಿದ್ದವು.

ಆದರೆ ಈ ನಿರ್ಲಕ್ಷ್ಯ ಸದಾ ಇರಲಿಲ್ಲ. ಕೆಲವು ಉತ್ತಮ ವರ್ಗದ ಪ್ರಾಣಿಗಳಲ್ಲಿ ತನ್ನ ಸಂತತಿಯಮೇಲೆ ಮಮತೆ ಮೂಡಿತು. ಮಮತೆ ಬೆಳೆದಂತೆ ಎಚ್ಚರಿಕೆ ತೆಗೆದುಕೊಳ್ಳಲನುಕೂಲವಾಗುವಂತೆ ಪ್ರಕೃತಿ ಅವುಗಳಿಡುವ ಮೊಟ್ಟೆಗಳ ಸಂಖ್ಯೆಯನ್ನು ಕಡಿಮೆಮಾಡಿತು. ಪ್ರಾಣಿಗಳು ತಮ್ಮ ಮೊಟ್ಟೆಯನ್ನು ಕಾಯ್ದು ಕಾವುಕೂತು ಶಾಖ ಕೊಟ್ಟು ಮರಿಯಾಗುವಂತೆ ನೋಡಿಕೊಂಡವು. ಮರಿಗಳಿಗೆ ಅಕ್ಕರೆಯಿಂದ ಗುಟುಕು ಕೊಟ್ಟವು.



ಪ್ರಾಣಿಗಳು ಇನ್ನೂ ಉತ್ತಮ ಅಂತಸ್ತಿಗೆ ಏರಿದಂತೆ ಮುಂದಿನ ಸಂತತಿಯ ಉತ್ಪತ್ತಿ ಕ್ರಮವೂ ಬದಲಾಯಿಸಿತು. ಹಲವು ಪ್ರಾಣಿಗಳಲ್ಲಿ ಮೊಟ್ಟೆಇಡುವುದು ನಿಂತಿತು. ಮೊಟ್ಟೆ ಗರ್ಭದಲ್ಲೆ ಬೆಳೆದು ಕೊನೆಗೆ ಮರಿಯಾಗಿ ಜನಿಸುವಂತಾಯಿತು. ಹೀಗೆ ಸಂಪೂರ್ಣ ಬೆಳೆದು ಬಂದ ಮರಿಗಳ ಪೋಷಣೆಗೆ ತಾಯಿಯಲ್ಲಿ ಸ್ತನಗಳು ಕಾಣಿಸಿಕೊಂಡು ಹಾಲು ಕೂಡಿತು. ಮರಿಗಳು ಮೊಲೆಯುಂಡು ಬೆಳೆಯಲು ಪ್ರಾರಂಭಿಸಿದವು. ಹೀಗೆ ತಮ್ಮ ಸಂತತಿಗೆ ಮೊಲೆಯೂಡುವ ಪ್ರಾಣಿಗಳಿಗೆ ಸಸ್ತನಿ ಪ್ರಾಣಿಗಳೆಂದು ಹೆಸರು.

ಹೀಗೆ ಪ್ರಕೃತಿಯ ಕೈವಾಡದಿಂದ ಪ್ರಪಂಚದಲ್ಲಿ ಚಮತ್ಕಾರದ ಮೇಲೆ ಚಮತ್ಕಾರ ನಡೆದು ಬಂತು.

ಇಷ್ಟಾದರೂ ಪ್ರಕೃತಿಯ ಯಕ್ಷಿಣಿ ಬುಟ್ಟಿಯಲ್ಲಿ ಇನ್ನೂ ಆಶ್ಚರ್ಯಕರವಾದ ಅಗಾಧವಾದ ಚಮತ್ಕಾರಗಳಿದ್ದವು. ಅವುಗಳ ವಿಷಯ ತಿಳಿಯಲು ಮುಂದುವರಿಯೋಣ.









# ಸಸ್ತನಿ ಪ್ರಾಣಿಗಳು

ಮರಿಗೆ ಮೊಲೆಯೂಡುವ ಸಸ್ತನಿ ಪ್ರಾಣಿಗಳು ತಮ್ಮ ಮರಿಗಳ ಯೋಗಕ್ಷೇಮ ನೋಡಿಕೊಂಡವು. ಅವುಗಳಿಗೆ ಮಮತೆಯಿಂದ ಮೊಲೆಗೊಟ್ಟವು. ಮರಿಗಳು ಸ್ವತಂತ್ರವಾಗಿ ಬಾಳುವಂತಾಗುವವರೆಗೂ ಅಕ್ಕರೆಯಿಂದ ಆಸರೆಯಿತ್ತವು. ತನ್ನ ಸಂತತಿಯ ಹಿತದಲ್ಲಿ ತನ್ನ ಹಿತವನ್ನು ಬಲಿಗೊಟ್ಟವು. ತ್ಯಾಗಬುದ್ಧಿಯ ಬೀಜ ಬಲಿತು ಮೊಳಕೆ ಅಂಕುರಿಸಿತು. ಹೀಗೆ ಮರಿಗಳು ತಾಯಿಯನ್ನು ಆಶ್ರಯಿಸಿರಬೇಕಾದುದರಿಂದ ತಾಯಿಯನ್ನೇ ಹೊಂದಿಕೊಂಡಿರುವುದು, ತಾಯಿಯನ್ನು ಅನುಕರಿಸಿ ಕೂಗುವುದು, ಆಡುವುದು ಬಂತು. ಜೀವನದ ಎಲ್ಲ ವಿಷಯದಲ್ಲಿಯೂ ತಾಯಿ ಅದಕ್ಕೆ ಮಾರ್ಗದರ್ಶಿ. ಹೀಗೆ ಶಿಕ್ಷಣಜೀವನ ಪ್ರಪಂಚದಮೇಲೆ ಕಾಣಿಸಿಕೊಂಡಿತು. ಮರಿಗಳಿಗೆ ತಾಯಿಯನ್ನು ಅನುಸರಿಸಿ ಕಲಿಯುವ ಸುಯೋಗ ಲಭಿಸಿತು. ತಮ್ಮ ಅನುಭವದ ಜೊತೆಗೆ ಈ ಕಲಿಕೆಯೂ ಕೂಡಿ ಬುದ್ಧಿ ಬೆಳವಣಿಗೆಗೆ ಅವಕಾಶವಾಯಿತು. ಶಿಕ್ಷಣದಿಂದ ಬುದ್ಧಿ ವಿಕಾಶವಾಗುವುದು ಸ್ವಾಭಾವಿಕ.

ಮರಿ ತಾನು ತಾಯಿಮೊಲೆಯುಣ್ಣುವುದು ಬಿಟ್ಟಮೇಲೆಯೂ ತಾಯಿಯನ್ನು ಬಿಟ್ಟು ಬೇರೆ ಹೋಗದೆ ಅದನ್ನನುಸರಿಸಿಕೊಂಡು ಬಾಳುವುದು. ಇದರಿಂದ ಒಂದರೊಡನೊಂದು ಹೊಂದುಕೊಂಡು ಬಾಳುವಂತಾಯಿತು. ಈ ರೀತಿಯಲ್ಲಿ ಆ ಸಂಬಂಧದ ಪ್ರಾಣಿಗಳು ಒಟ್ಟಾಗಿದ್ದು ಮುಂದೆ ಜೀವನ

ಪ್ರಾರಂಭವಾಯಿತು. ಬಲಿಷ್ಠವಾದ ಪ್ರಾಣಿ ಮಂದೆಯ ಮುಂದಾಳಾಗಿ ಮಂದೆಯನ್ನು ನಡೆಸುವುದು. ಎಲ್ಲವೂ ಸಹವಾಸಪ್ರಿಯವಾಗಿ ಬಾಳುವವು.

ಈಗಲೂ ನಾವು ಪ್ರಾಣಿಗಳ ಮಂದೆಗಳನ್ನು ನೋಡುತ್ತೇವೆ. ಮಾನವ ಸಮಾಜದಲ್ಲಿರುವಂತೆ ಆ ಪ್ರಾಣಿಗಳ ವೈಯ್ಯಕ್ತಿಕ ಜೀವನದಲ್ಲಿ ಗಜಿಬಿಜಿಯಿಲ್ಲ. ಅವುಗಳ ಜೀವನ ಸಂದೇಹಗಳಿಂದ ತುಂಬಿ ಡೊಂಕಾಗಿರದೆ ನೇರವಾಗಿದೆ. ಅವುಗಳ ಆಸೆಯೂ ಅಷ್ಟೇಸರಳ; ಗುಂಪಿನಲ್ಲಿರಬೇಕು, ತಮ್ಮ ಗುಂಪಿನ ಇತರ ಪ್ರಾಣಿಗಳಿಗೆ ಅಪಾಯವಾಗದಂತೆ ಎಚ್ಚರಿಕೆಯಿಂದಿರ ಬೇಕೆಂಬುದೇ ಜೀವನದ ಗುರಿ. ಮಾನವ ಜೀವನ ಏನೇನೋ ಆಶೆ ನಿರಾಶೆಯ ಗಜಿಬಿಜಿಯಿಂದ ಮಲಿನವಾಗಿರುವುದರಿಂದ ಈ ಪ್ರಾಣಿಗಳ ಸರಳತೆಯನ್ನು ಅರಿಯಲಾರದವರಾಗಿದ್ದೇವೆ. ಇರಲಿ.

ಕಾಲ ಉರುಳಿದಂತೆ ಪ್ರಾಣಿಗಳಲ್ಲಿ ಮಾರ್ಪಾಡುಂಟಾಗುತ್ತ ನಡೆ ಯಿತು. ಈ ಪರಿಣಾಮದಿಂದ ಹೊಸಹೊಸ ಬಗೆಯ ಪ್ರಾಣಿಗಳು ವೃದ್ಧಿ ಯಾದವು. ಹಿಂದೆ ಇದ್ದ ವಿಕಾರರೂಪಿನ ಭಯಂಕರ ಆಕಾರದ ಪೆದ್ದ ಪ್ರಾಣಿಗಳೆಲ್ಲ ಮರೆಯಾಗುತ್ತ ಬಂದವು. ಆ ಪೆಡಂಭೂತಗಳ ಶ್ರೇಣಿಗಳಲ್ಲಿ ಕ್ರಮೇಣ ನಡೆದ ಪರಿಣಾಮದ ಫಲವಾಗಿ ಈಗಿರುವಂತೆ ನಾನಾಬಗೆಯ ಪಕ್ಷಿಗಳು, ಜಿರಾಫೆ, ಒಂಟೆ, ಆನೆ, ಕುದುರೆ, ಹುಲಿ, ಸಾರಗ, ನಾಯಿ, ಕಪಿ ಮೊದಲಾದ ಪ್ರಾಣಿಗಳು ಜನ್ಮ ತಾಳಿದವು.

ಭೂಮಿಯಲ್ಲಿ ಆಗಾಗ್ಗೆ ಶೀತಯುಗ ಕಾಣಿಸಿಕೊಂಡವು. ನಾಲ್ಕ ನೆಯ ಶೀತೆಯುಗದಲ್ಲಿ ಸಸ್ತನಿ ಪ್ರಾಣಿಗಳು ಉದ್ಭವವಾದುದು. ಮತ್ತು ತಡೆಬಡೆ ಇಲ್ಲದೆ ನಾನಾರೂಪದಲ್ಲಿ ವೃದ್ಧಿ ಹೊಂದಿದುದು. ಅಂತೆ ಅದು ಹೊಸನೆಲ ಮತ್ತು ಪರ್ವತಗಳ ಉದ್ಭವಕಾಲ. ಆಗಲೇ ಹಿಮಾಲಯ ಪರ್ವತ, ಆಲ್ಪ್ಸ್‌ಪರ್ವತಗಳು ಮೇಲೆದ್ದವು. ಅದುವರೆಗೂ ಆ ಸ್ಥಳಗಳು ತಗ್ಗಾಗಿ ಸಮುದ್ರಗಳಾಗಿದ್ದವು.

ಸಸ್ತನಿ ಪ್ರಾಣಿಗಳು ನಾನಾಬಗೆಯಲ್ಲಿ ಅಭಿವೃದ್ಧಿ ಹೊಂದಿದವು ತಾನೆ. ಇವುಗಳಿಗೆ ಬಹುಮುಖ್ಯವಾಗಿದ್ದುದು ಆಹಾರದ ಪ್ರಶ್ನೆ. ಈ ಸಮಸ್ಯೆ ಬಗೆಹರಿಸಿಕೊಳ್ಳುವುದರಲ್ಲಿ ಕೆಲವು ಹಣ್ಣು ಹಂಪಲುಗಳನ್ನೇ ತಮ್ಮ ಮುಖ್ಯ ಆಹಾರ ಮಾಡಿಕೊಂಡವು. ಹಣ್ಣು ಹಂಪಲುಗಳು ಅಪಾರವಾಗಿ ಸಿಕ್ಕುತ್ತಿದ್ದುದರಿಂದ ತಾವು ಬಯಸಿದಾಗ ಆಹಾರ ಸಂಪಾದಿಸಲು ಕೆಲವು ಸಸ್ತನಿ ಪ್ರಾಣಿಗಳು ಮರ ಹತ್ತಿದವು. ಕ್ರಮೇಣ ಈ ಪ್ರಾಣಿಗಳು ಮರದ ಮೇಲೆಯೇ ವಾಸಮಾಡತೊಡಗಿದವು. ಈ ಜಾತಿಯಲ್ಲೇ ಕಪಿಗಳ ಸಂತತಿ ಬೆಳೆದುದು.

## ಶಾಖಾ ಪ್ರಾಣಿಗಳು

ಮರ ಹತ್ತಿ ಕೊಂಬೆಯಿಂದ ಕೊಂಬೆಗೆ ಹಾರುವುದು ಮತ್ತು ಅಲ್ಲಿಂದ ಜಾರಿಬೀಳದೆ ಎಚ್ಚರಿಕೆಯಿಂದಿರುವುದು ಸುಲಭದ ಕೆಲಸವಲ್ಲ. ಅಲ್ಲದೆ ಆಟ, ಊಟ, ನಿದ್ರೆ ಎಲ್ಲವೂ ಅಲ್ಲೇ. ಮರದ ಮೇಲಣ ಈ ಜೀವನಕ್ಕೆ ಅನುಕೂಲವಾಗಿ ಕಪಿಗಳ ಮೈ ಸಣ್ಣದಾಯಿತು; ಮಿದುಳು ವೃದ್ಧಿಯಾಯಿತು; ಬುದ್ಧಿ ಚುರುಕಾಯಿತು; ಕಾಲು, ಬಾಲ ಅನುಕೂಲವಾಗಿ ಮಾರ್ಪಟ್ಟವು; ಕೊಂಬೆಗಳನ್ನು ಹಿಡಿದುಕೊಳ್ಳಲನುಕೂಲವಾಗಿ ಕಾಲುಗಳ ತುದಿಯಲ್ಲಿ ಉದ್ದವಾದ ಬೆರಳುಗಳು ಹುಟ್ಟಿಕೊಂಡವು.

ಮರದ ಮೇಲೆ ಬದುಕುವ ಪ್ರಾಣಿಗಳಿಗೆ ಶಾಖಾ ಪ್ರಾಣಿಗಳೆಂದು ಹೆಸರು. ಈ ಶಾಖಾ ಪ್ರಾಣಿಗಳ ಸಂತತಿ ಕೊನೆ ಮೊದಲಿಲ್ಲದೆ ಬೆಳೆಯಿತು. ಇವುಗಳಲ್ಲಿ ಕೆಲವಕ್ಕೆ ಅದೇಕೋ ಭೂಮಿಯ ವಾಸವೇ ರುಚಿಸಿತು. ಸರಿ, ಅವು ಮರಬಿಟ್ಟು ಭೂಮಿಗೆ ಒಗ್ಗಿಕೊಂಡು, ಅಲ್ಲೇ ವಾಸಿಸತೊಡಗಿದವು. ಭೂಮಿಯ ವಾಸಕ್ಕನುವಾಗಿ ಅವುಗಳ ಮುಂದಿನ ಪೀಳಿಗೆಯ ಅಂಗಗಳಲ್ಲಿ ಬದಲಾವಣೆ ಉಂಟಾಯಿತು. ಬೇಕಾದಾಗ ಮರವೇರಲೂ ಅವುಗಳಿಗೆ ಸಾಧ್ಯವಿತ್ತು.

ಮರದ ವಾಸಕ್ಕಿಂತಲೂ ಭೂಮಿಯವಾಸ ಆಗ ಕಷ್ಟವಾಗಿತ್ತು. ಭೂಮಿಯಮೇಲೆ ಅವಕ್ಕಿಂತಲೂ ಬಲವಾದ ಕ್ರೂರಪ್ರಾಣಿಗಳು ಬೇಕಾದಷ್ಟಿದ್ದವು. ಅವುಗಳ ಗಂಡಾಂತರದಿಂದ ತಪ್ಪಿಸಿಕೊಂಡು ಬದುಕಬೇಕು. ಆ ಹಾವಳಿಯ ಮಧ್ಯೆ ತಮ್ಮ ಆಹಾರವನ್ನು ಸಂಪಾದಿಸಬೇಕು. ಈ ಬದುಕಿನ ಹೋರಾಟದಲ್ಲಿ ಬುದ್ಧಿಶಕ್ತಿ ಇನ್ನೂ ವಿಕಾಸವಾಯಿತು.

## ಆದಿ ಮಾನವನಿಗೆ ಹತ್ತಿರ ಸಂಬಂಧದ ಪ್ರಾಣಿ

ಸಸ್ತನಿ ಪ್ರಾಣಿಗಳ ದರ್ಜೆ ಉತ್ತಮವಾದಂತೆ, ಅವುಗಳ ಬುದ್ಧಿ ವಿಕಾಸಗೊಂಡಂತೆ, ತಮ್ಮ ಪೀಳಿಗೆಯ ವಿಷಯದಲ್ಲಿ ಅವಕ್ಕೆ ಹೆಚ್ಚು ಹೆಚ್ಚು ಮಮತೆ ಮೂಡಿದಂತೆ ಅವುಗಳ ಸಂತತಿ ಹುಟ್ಟುವಾಗ ಹೆಚ್ಚು ಹೆಚ್ಚು ನಿರ್ಬಲವಾಗುವುವು. ಅದು ಪ್ರಕೃತಿ ನಿಯಮ. ತಂದೆ ತಾಯಿಯ ಆಶ್ರಯವಿಲ್ಲದೆ ಆ ನಿರ್ಬಲ ಹಸುಳೆಗಳು ಬದುಕಲು ಸಾಧ್ಯವೇ ಇಲ್ಲ. ಭೂಮಿಯ ವಾಸವನ್ನನುಸರಿಸಿದ ಕಪಿಗಳ ಪಾಡೂ ಹಾಗೆಯೇ. ತಂದೆ ತಾಯಿ ತಮ್ಮ ಮರಿಗಳನ್ನು ಜೋಪಾನವಾಗಿ ರಕ್ಷಿಸಬೇಕಾಯಿತು. ಅದಕ್ಕಾಗಿ ಒಂದು ಸ್ಥಳ ಬೇಕಲ್ಲವೆ? ಕಲ್ಲು ಪೊಟ್ಟರೆ, ಗುಹೆ, ದೊಡ್ಡದೊಡ್ಡ ಮರಗಳ ಪೊಟರೆಗಳು ಅವುಗಳ ವಾಸಸ್ಥಳಗಳಾದವು. ಹೀಗೆ ಜೀವನದ ಹೊಡಬಾಳು ಹೆಚ್ಚಾಯಿತು. ಅದನ್ನು ಸಹಿಸಲು ತಕ್ಕಂತೆ ಅನುಕೂಲವಾಗಿ ಮೈಯೂ ಬೆಳೆಯಿತು. ಅದರ ಪರಿಣಾಮಕ್ಕೆ ದಾರಿಗಾಣಲು ಅನುಕೂಲವಾಗುವಂತೆ ಬುದ್ಧಿಯೂ ಕುದುರಿತು. ಹೀಗೆ ಸುತ್ತು ಮುತ್ತಣ ಆವರಣಕ್ಕೆ ಅನುಕೂಲವಾಗಿ ಈ ಮಂಗಗಳಲ್ಲಿ ಮಾರ್ಪಾಡಾಗುತ್ತಾ ಬಂತು. ಈ ಬದಲಾವಣೆ ಸಂತತಿಯಿಂದ ಸಂತತಿಗೆ ಕಿಂಚಿತು ಕಿಂಚಿತಾಗಿ ವೃದ್ಧಿಯಾಯಿತು.

ಆ ಪ್ರಾಣಿಗಳಲ್ಲೇ ಮನುಷ್ಯನಿಗೆ ಈಗಿರುವ ಇನ್ನಾವ ಪ್ರಾಣಿಗಿಂತಲೂ ಬಲುಹತ್ತಿರ ಸಂಬಂಧದ ಪ್ರಾಣಿಯು ಉದ್ಭವವಾದುದು.

ಆದರದು ನಿಜವಾದ ಮಾನವನ ಪ್ರವೇಶಕಿನ್ನೂ ಎಷ್ಟೋ ದೂರವಿತ್ತು. ಮನುಷ್ಯ ಸಂತತಿಗೆ ಬಲು ಹತ್ತಿರದ ಪ್ರಾಣಿಯೆಂದರೆ ಗೋರಿಲ್ಲ



ವಾನರ

ವನ್ನು ಹೋಲುವ ವಾನರ. ಆ ವಾನರಗಳ ಹಿಂಗಾಲು ಗೋರಿಲನ ಹಿಂಗಾಲುಗಳಿಗಿಂತಲೂ ಬಲವಾಗಿದ್ದವು. ಮುಂಗಾಲುಗಳು ಅಥವಾ ಕೈಗಳು ಮೋಟಾಗಿದ್ದವು.

ಈ ಪ್ರಾಣಿಗಳ ಮಿದುಳು ಮಂಗಗಳ ಮಿದುಳಿಗಿಂತ ಬಲು ದೊಡ್ಡ ದಾಗಿತ್ತು. ಅವುಗಳ ಕಣ್ಣು ಕಿವಿ ಮನುಷ್ಯನ ಕಣ್ಣು ಕಿವಿಗಳಂತೆಯೇ ಚುರುಕಾಗಿದ್ದವು. ಮಂಗನ ಮೈ ಎಷ್ಟರಮಟ್ಟಿಗೆ ನಮ್ಮಂತೆಯೇ ಇದೆ ಯೆಂದರೆ, ಹತ್ತಿರ ಹತ್ತಿರ ಅದೇ ತರಹ ಮೂಳೆಗಳೂ ಅಂಗಗಳೂ ಇವೆ.

ಮನುಷ್ಯನಿಗೂ ಮಂಗಗಳಿಗೂ ಸಾಮಾನ್ಯವಾದ ಕೆಲವು ರೋಗ ಗಳನ್ನು ಉಳಿದ ಪ್ರಾಣಿಗಳಲ್ಲಿ ನಾವು ನೋಡಲಾರೆವು. ಮನುಷ್ಯನ ಮತ್ತು ಮಂಗಗಳ ರಕ್ತವನ್ನು ಪರೀಕ್ಷೆಮಾಡಿ ನೋಡಿದ್ದರಲ್ಲಿ ಅವುಗಳಿಗೆ ಪರಸ್ಪರ ಸಂಬಂಧವಿದೆ ಎಂಬುದಕ್ಕೆ ಪ್ರಮಾಣ ದೊರೆತಿದೆ. ಮಂಗಗಳ ಕೈಗಳ ತಿರುವುಗಳೂ ಕೂಡ ಮನುಷ್ಯನ ಕೈಗಳಂತೆಯೇ ಇವೆ. ತಲೆ ಬುರುಡೆ, ಅದರಲ್ಲಿ ಮೆದುಳಿರುವ ಭಾಗ ಮಾನವನ ತಲೆಬುರುಡೆಯನ್ನೇ ಹೋಲುತ್ತದೆ. ಇದರಿಂದಲೇ ಮಂಗ ಅಷ್ಟು ಮಾನವೀಯವಾಗಿ ಕಾಣು ತ್ತದೆ. ಆದರಿಂದಲೇ ಅದು ಒಂದು ದೊಡ್ಡ ಕಾರ್ಯಕ್ರಮವನ್ನು ಆಲೋಚಿಸ ಸಬಲ್ಲುದು ; ಹೊಸದೊಂದು ಪರಿಸ್ಥಿತಿಯನ್ನು ಎದುರಿಸಿ ಅದನ್ನು ಸಾಧಿಸ ಬಲ್ಲುದು. ಬಹಳ ಹೊತ್ತು ಮನಸ್ಸನ್ನು ಒಂದೇಕಡೆತಿರುಗಿಸಿ ಏಕಾಗ್ರತೆ ಯನ್ನು ಸಾಧಿಸಬಲ್ಲುದು.

ಈ ಚುರುಕು ಮಿದುಳು ಯಾವ ಪರಿಸ್ಥಿತಿಗೆ ಬೇಕಾದರೂ ಹೊಂದಿ ಕೊಳ್ಳಬಲ್ಲ ದೇಹವೊಂದನ್ನು ತನ್ನ ಅಧೀನದಲ್ಲಿಟ್ಟುಕೊಂಡಿದೆ. ತಮ್ಮ ಕೈಗಳನ್ನೂ ಉಪಯೋಗಿಸುವುದಕ್ಕೆ ಹೆಚ್ಚು ಅಪೇಕ್ಷೆಯಿದ್ದರೂ ಮಂಗಗಳು ಸ್ವಲ್ಪಹೊತ್ತು ತಮ್ಮ ಹಿಂಗಾಲುಗಳ ಮೇಲೆ ನಡೆಯಬಲ್ಲವು. ಮಂಗಗಳಿಗೆ ಅಷ್ಟು ಶಕ್ತಿಯುತವಾದ ಮಿದುಳಿದ್ದುದರಿಂದಲೇ ಅವು ಯಾವ ಪರಿಸ್ಥಿತಿಗೆ ಬೇಕಾದರೂ ಹೊಂದಿಕೊಳ್ಳಬಲ್ಲ ಶಕ್ತಿ, ಕೈಗಳು, ನೆಟ್ಟಗೆನಿಂತುಕೊಳ್ಳು ವಿಕೆ ಇವುಗಳಮೂಲಕ ಮಾನವ ಸಂತತಿಯ ಮೂಲವನ್ನು ನಮಗೆ ಜ್ಞಾಪಕ ತರುತ್ತವೆ. ಈ ಮಂಗಗಳ ಸಂತತಿ ವೃದ್ಧಿಯಾಗಿ ಮುಂದೆ ಮಂಗಮನುಷ್ಯ ಅಥವಾ ವಾನರನನ್ನು ರೂಪಿಸಿತು.

## ವಾನರ

ಹಿಂದೂಸ್ಥಾನದ ಉತ್ತರದಲ್ಲಿರುವ ಹಿಮಾಲಯ ಶ್ರೇಣಿಯ ಸಿವಾಲಿಕ್ ಬೆಟ್ಟಸ್ತೋಮವೇ ಈ ವಾನರ ಪ್ರಾಣಿಗಳ ತವರೂರಾಗಿರಬೇಕೆಂದು ವಿಜ್ಞಾನಿಗಳು ಹೇಳುತ್ತಾರೆ. ಅಲ್ಲಿಂದ ಅವು ಆಫ್ರಿಕ, ಜಾವ, ಯೂರೋಪುಗಳಿಗೆ ಹರಡಿರಬೇಕು. ಆಗ ಈ ಭೂಭಾಗಗಳು ಒಂದರೊಡನೊಂದು ಸೇರಿದ್ದರಬೇಕು.

ಚಿಂಪಾಂಜಿ, ಆರೆಂಗೋಟ್ಯಾಂಗೊ, ಮತ್ತು ಗೊರಿಲ್ಲಾಗಳಾಗಿ ಪರಿಣಾಮಹೊಂದಿದ ಮಂಗಗಳ ಪೈಕಿ ಮನುಷ್ಯವರ್ಗದ ಮೂಲಪ್ರಾಣಿಗಳು ನೆಲದ ಮೇಲಿನ ಮಂಗಗಳು. ಅವು ಒಟ್ಟನಲ್ಲಿ ಎಲ್ಲ ಬಗೆಯ ದೇಶಗಳಲ್ಲಿಯೂ ಧಾರಾಳವಾಗಿ ಓಡಾಡತೊಡಗಿದವು. ಇದರಿಂದ ಅವು ಹೊಸ ಅನುಭವ ಪಡೆದವು. ಇದು ಅವುಗಳ ಗ್ರಹಣಶಕ್ತಿಯ ಮಿದುಳನ್ನು ಬಹಳ ಮಟ್ಟಿಗೆ ಚುರುಕು ಮಾಡಿತು. ಹೊಸ ನೋಟಗಳು, ಹೊಸ ಧ್ವನಿಗಳು, ಹೊಸ ಸ್ಪರ್ಶಾನುಭವಗಳು ಮಿದುಳಿನ ಮೇಲೆ ಮತ್ತೆ ಮತ್ತೆ ಪ್ರಭಾವ ಬೀರಿದವು. ಹೀಗಾಗಿ ಆ ಪ್ರಾಣಿಗಳಿಗೆ ಮಾನವನಾಗುವ ಸ್ಥಾನಕ್ಕೆ ಆಹ್ವಾನ ಲಭಿಸಿತು.

## ಮನಸ್ಸಿನ ಹತೋಟಿ

ಅವುಗಳ ಸೌಖ್ಯಕ್ಕೋಸ್ಕರ ಏಕಾಗ್ರತೆ ಮತ್ತು ಮುಂದಿನ ಕಾರ್ಯವನ್ನು ಆಲೋಚಿಸುವುದು ದಿನ ದಿನವೂ ಅವುಗಳಿಗೆ ಆವಶ್ಯಕವಾದುವು. ಏಕೆಂದರೆ ಹೊಸ ಸಮಸ್ಯೆಗಳು ಅವುಗಳ ಮುಂದೇಳುತ್ತಿದ್ದವು. ಹೀಗಾಗಿ ಮಿದುಳು ಬಹಳ ಬೇಗನೆ ಬೆಳೆಯಿತು.

ಮಂಗಗಳಿಂದ ಮನುಷ್ಯನಾಗಿ ಮಾರ್ಪಾಡಾದುದು ಬಹಳ ಕ್ರಮಬದ್ಧವಾಗಿ ನಡೆದಿರಬೇಕು. ಮತ್ತು ಈ ದೃಷ್ಟಿಯಿಂದ ಮಿದುಳಿನ ಆಕಾರ ಬೆಳವಣಿಗೆ ಅಭಿವೃದ್ಧಿಯಲ್ಲಿ ಕೊನೆ ಮುಟ್ಟಲು ಬಹಳ ಹೆಚ್ಚುಕಾಲವನ್ನು

ತೆಗೆದುಕೊಂಡಿರಬೇಕು. ಈ ಬೆಳವಣಿಗೆ ಕೆಳದರ್ಜೆಯ ಪ್ರಾಣಿಗಳಲ್ಲೂ ಮನಸ್ಸಂಬಂಧವಾದ ಮಿದುಳಿನ ಹತೋಟಿಗಳಪಟ್ಟು ನಡೆಯಿತು. ಆದ ರಿಂದ ಆಕಸ್ಮಿಕವಾಗಿ ಒದಗುವ ಮತ್ತು ನೈಸರ್ಗಿಕ ಕಾರ್ಯಗಳ ಪ್ರಭಾವ ಅವುಗಳ ಮೇಲೆ ಕಮ್ಮಿಆಯಿತು. ಮನಸ್ಸಿನ ಹತೋಟಿಗೊಳಪಟ್ಟ ಕಾರ್ಯಗಳು ಮತ್ತು ಭಾವನೆಗಳು ಹೆಚ್ಚಿದವು. ಪರಿಪೂರ್ಣವಾದ ದೃಷ್ಟಿ ಮತ್ತು ಸೂಕ್ಷ್ಮವಾದ ಸ್ಪರ್ಶ ಇವುಗಳಿಗಿದ್ದ ಪರಸ್ಪರ ಸಾಮರಸ್ಯದಿಂದ ಸೌಂದರ್ಯ ಜ್ಞಾನವು ಅಭಿವೃದ್ಧಿ ಆಯಿತು. ಮತ್ತು ಲೈಂಗಿಕ ಆಯ್ಕೆಯ ಮೂಲಕ ಕಾರ್ಯನಡೆದು ದೇಹದಲ್ಲಿ ನಯ ನಾಜೂಕುಗಳನ್ನು ತಂದಿತು. ಹೀಗೆಯೇ ಪರಿಣಾಮಗೊಂಡು ಕೊನೆಗೆ ಮಾನವನ ಉದಯವಾಯಿತು.




ವಿಕಾಸವಾದ

## ಜೀವನ ಸಂಗ್ರಾಮ

ಜೀವವು ಅಣುಪ್ರಮಾಣದಲ್ಲಿ ಅವ್ಯಕ್ತರೂಪದಲ್ಲಿ ಪ್ರಾರಂಭವಾಗಿ ಮನುಷ್ಯತ್ವದವರೆಗೆ ಕ್ರಮವಾಗಿಯೂ ಸಂತತವಾಗಿಯೂ ಅಭಿವೃದ್ಧಿ ಹೊಂದಿದೆಯೆಂಬುದನ್ನು ಸಾಮಾನ್ಯವಾಗಿ ಹೇಳಿದಂತಾಯಿತು. ಕಾಲಾನುಕ್ರಮದಲ್ಲಿ ಪೀಳಿಗೆಯಿಂದ ಪೀಳಿಗೆಗೆ ಆಕೃತಿಯಲ್ಲೂ, ಬುದ್ಧಿಶಕ್ತಿಯಲ್ಲೂ ಸೂಕ್ಷ್ಮವಾದ ವ್ಯತ್ಯಾಸಗಳುಂಟಾದವು. ಈ ಬದಲಾವಣೆ ಪ್ರಾಣಿಗಳಿಗೆ ತಮ್ಮ ಶತ್ರುಗಳನ್ನು ಎದುರಿಸುವುದರಲ್ಲೂ, ಆಹಾರ ಸಂಪಾದನೆಯಲ್ಲೂ ತಮ್ಮ ಸಂಸಾರವನ್ನು ಪೋಷಿಸುವುದರಲ್ಲೂ ಹೆಚ್ಚು ಅನುಕೂಲವನ್ನು ಕೊಟ್ಟವೆ. ದುರ್ಬಲವೂ ಹೆಚ್ಚು ಅನುಕೂಲಗಳಿಸಲಾರದವುಗಳೂ ಆದ ಪ್ರಾಣಿಗಳು ವಾತಾವರಣದ ಕ್ರೌರ್ಯಕ್ಕೆ ಸಿಕ್ಕಿ ಅಥವಾ ಹಸಿವಿನ ದವಡೆಗೆ ಒಳಗಾಗಿ ನಾಶವಾಗಿವೆ. ಇದರಿಂದ ಅವುಗಳು ತಮ್ಮ ಸಂತತಿಯನ್ನು ಉಳಿಸದೆ ನಿರ್ನಾಮವಾಗಿ ಅಳಿದು ಹೋಗಿವೆ. ಆದರೆ ಸನ್ನಿವೇಶಕ್ಕೆ ಹೊಂದಿಕೊಂಡು ಜೀವನ ಸಂಗ್ರಾಮದಲ್ಲಿ ಪ್ರಭಲಶಾಲಿಯಾದ ಪ್ರಾಣಿಗಳಿಂದ ಸಂತತಿ ವೃದ್ಧಿಯಾಯಿತು. ಈ ತತ್ವವನ್ನನುಸರಿಸಿ ಒಂದು ಪೀಳಿಗೆಯಿಂದ ಮುಂದಿನ ಪೀಳಿಗೆಯು ಪರಿವರ್ತನೆಗೊಂಡು– ಪರಿವರ್ತನೆ ಅದೆಷ್ಟೇ ಕಿಂಚಿದಾಗಿರಲಿ, ಅಪ್ರತ್ಯಕ್ಷವಾಗಿರಲಿ– ಪ್ರಾಣಿವರ್ಗ ವೃದ್ಧಿಯಾಗಲು ಮಾರ್ಗ ಮಾಡಿವೆ.

ಈ ಅದ್ಭುತವಾದ ವ್ಯತ್ಯಾಸಗಳು ಹೇಗೆ ಮತ್ತು ಏಕೆ ನಡೆದಿವೆ ಎಂಬ ಪ್ರಶ್ನೆಯನ್ನು ನಾವು ಈಗ ವಿಚಾರಮಾಡೋಣ. ಪ್ರಾಣಿಗಳ ಆಕಾರ

ತಾವು ಹುಟ್ಟಿದ ಪರಿಸ್ಥಿತಿಗೆ ಪ್ರಮಾಣ ಮತ್ತು ನಿದರ್ಶನ. ಪರಿಸ್ಥಿತಿಯು ವ್ಯತ್ಯಾಸ ಹೊಂದಿದಂತೆ ಅವುಗಳೂ ವ್ಯತ್ಯಾಸಹೊಂದಬೇಕಾದುದು ಸಹಜವಾದುದು. ಸನ್ನಿವೇಶದ ಪರಿಸ್ಥಿತಿಗಳು ಹಠಾತ್ತಾಗಿ ಕ್ಷಣಾರ್ಧದಲ್ಲಿ ಬದಲಾಯಿಸಿಬಿಟ್ಟಾಗ ಪ್ರಾಣಿಗಳು ನಿಸ್ಸಂದೇಹವಾಗಿ ನಾಶಹೊಂದುತ್ತವೆ. ಆದರೆ ಪರಿಸ್ಥಿತಿ ಸ್ವಾಭಾವಿಕವಾಗಿ ಕ್ರಮಬದ್ಧವಾಗಿ ವ್ಯತ್ಯಾಸಗೊಂಡಾಗ ಅವಕ್ಕೆ ಅಂಟಿಕೊಂಡು ಬಾಳುವ ಪ್ರಾಣಿಗಳಲ್ಲಿ ಆ ವ್ಯತ್ಯಾಸಕ್ಕೆ ಹೊಂದಿಕೊಂಡ ವ್ಯತ್ಯಾಸಗಳಾಗುವುದು ಸಹಜವಾದುದು. ಜೀವದ ಆದಿಕಣವು ಪ್ರಕೃತಿ ನಿಯಮವನ್ನನುಸರಿಸಿ ವಿವಿಧ ಶಕ್ತಿಗಳ ಪ್ರಭಾವದಿಂದ ರೂಪ ವೈವಿಧ್ಯತೆ ಮತ್ತು ಮನೋವೈವಿಧ್ಯತೆಗಳನ್ನು ಹೊಂದಿತು. ಈ ವೈವಿಧ್ಯ ರಚನೆಯ ಬಿಕ್ಕಟ್ಟು ವಾತಾವರಣದಲ್ಲಿನ ಬಿಕ್ಕಟ್ಟಿನ ಫಲ.

ಒಂದೇ ಪರಿಸ್ಥಿತಿ ಒಂದೇ ವಲಯಗಳಿಂದ ಕೂಡಿದ್ದ ಈ ಭೂಗೋಳವು ನಾವೀಗ ವಾಸಮಾಡುತ್ತಿರುವ ವೈವಿಧ್ಯ ಪರಿಸ್ಥಿತಿಯಿಂದ ಕೂಡಿದೆ. ನಾವು ನಿಂತಿರುವ ಭೂಮಿಯಲ್ಲಿ ಅಡಿಗಡಿಗೆ ವ್ಯತ್ಯಾಸ ಕಾಣುತ್ತದೆ. ಸನ್ನಿವೇಶದ ಬಹುರೂಪತೆ ವ್ಯಕ್ತಿತ್ವದಲ್ಲಿ ಬಹುರೂಪತೆಯನ್ನು ತರುತ್ತದೆ. ಇದನ್ನನುಸರಿಸಿ ಏಕರೀತಿಯಿಂದ ವಿವಿಧತೆಗೆ, ಸರಳತೆಯಿಂದ ಜಟಿಲತೆಗೆ, ಏಕರೂಪಿನಿಂದ ಬಹುರೂಪಿಗೆ ಪ್ರಾಣಿಜೀವನದಲ್ಲಿ ಅಭಿವೃದ್ಧಿಯುಂಟಾಗಿರುವುದು.

ಈ ವಿವಿಧ ಸನ್ನಿವೇಶವನ್ನನುಸರಿಸಿ ಜೀವವು, ಪೀಳಿಗೆಯಿಂದ ಪೀಳಿಗೆಯಲ್ಲಿ ಬದುಕಬೇಕಾಯಿತು. ಜೀವನ ಸಂಗ್ರಾಮದಲ್ಲಿ ಸ್ಪರ್ಧಾಸಂಕಲ್ಪವುಳ್ಳ ಪ್ರಾಣಿ ಅದೆಷ್ಟೇ ಸಣ್ಣದಾಗಿರಲಿ ಚಿರಕಾಲ ಬಾಳುತ್ತದೆ. ಪ್ರಕೃತಿ ನಿಯಮವೇ ಅದು.

ಈಗಿರುವ ಪ್ರಾಣಿಗಳಲ್ಲಿ ರೂಪ ವೈವಿಧ್ಯತೆ ಮತ್ತು ಮನೋವೈವಿಧ್ಯತೆಗೆ ಕಾರಣ ಜೀವನ ಸಂಗ್ರಾಮದ ಹೋರಾಟವಷ್ಟೇ ಅಲ್ಲ. ಜೀವದೊಂದಿಗೆ ಹುಟ್ಟಿ ಬೆಳೆದುಬಂದ ಸಂಕಲ್ಪ ಮತ್ತು ಆಪೇಕ್ಷೆ ಮುಖ್ಯಕಾರಣ.

ಜೀವಿಗೆ ವೇದನ ಶಕ್ತಿ ಬಂದಾಗಲೇ ಅದರೊಡನೆಯೇ ರಾಗದ ಬೀಜವಿತ್ತು. ರಾಗದ ಆವೇಗ ಪ್ರಾಣಿಯನ್ನು ಉತ್ತಮತೆಯ ಕಡೆಗೆ ಒಯ್ದಿತು.

**ಆಸೆ-ಸಂಕಲ್ಪ**

ಜೀವನ ಸಮಸ್ಯೆ ಜಟಿಲವಾದಂತೆ ಆಸೆ, ಆಸಕ್ತಿ, ಆಕಾಂಕ್ಷೆಗಳು ಜಟಿಲವಾದವು. ಒಂದು ಆಸೆ, ಒಂದು ಸಂಕಲ್ಪ ಮೊದಮೊದಲು ಸೂಕ್ಷ್ಮ ಜೀವಿಗಳಲ್ಲಿ, ಸರಳ ಜೀವಿಗಳಲ್ಲಿ ಕಿಂಚಿತಾಗಿಯೇ ಸರಳವಾಗಿಯೇ ಇತ್ತು. ಆದರೆ ಕ್ರಮೇಣ ಅದು ಸುಷುಪ್ತಾವಸ್ಥೆಯನ್ನು ಮೀರಿ ತನ್ನ ಒಂದಾದ ಮೇಲೆ ಒಂದು ಹೆಡೆಯನ್ನು ಎತ್ತುತ್ತ ಸಹಸ್ರಮುಖಿಯಾಯಿತು. ಆ ಆಸೆ ಆ ಸಂಕಲ್ಪ, ಅನುವಂಶೀಯವಾಗಿ ಪೀಳಿಗೆಯಿಂದ ಪೀಳಿಗೆಯಲ್ಲಿ ಬೆಳೆಯುತ್ತಬಂತು. ಇದನ್ನನುಸರಿಸಿ ರೂಪಿನಲ್ಲಿಯೂ, ಮನಸ್ಸಿನಲ್ಲಿಯೂ ಪರಿವರ್ತನೆಯುಂಟಾದುದರ ಫಲವೇ ಈಗಿನ ವೈವಿಧ್ಯತೆಗೆ ಕಾರಣ.

ಸಾಮಾನ್ಯವಾಗಿ ನಾವೆಲ್ಲ ನೋಡಿರತಕ್ಕ ಕಪ್ಪೆ ಒಂದು ಜನ್ಮದ ಇತಿಹಾಸದಲ್ಲಿಯೇ ಈ ರೀತಿಯ ವ್ಯತ್ಯಾಸಕ್ಕೆ ಸ್ವಾರಸ್ಯವಾದ ಒಂದು ಉದಾಹರಣೆಯಾಗಿದೆ. ಅದು ಜಲಚರವಾಗಿ ಹುಟ್ಟಿ ಅಲ್ಲಿಯೇ ಬೆಳೆಯುತ್ತದೆ. ಆದರೆ ಭೂಮಿಯ ಮೇಲೆ ಬದುಕಬೇಕೆಂಬ ಅನುವಂಶೀಯವಾಗಿ ಬಂದ ಅದರ ಆಸೆ ಅದೇ ಜೀವನದಲ್ಲಿ ನೆರವೇರುತ್ತದೆ. ಮುಂದೆ ಅದು ಶ್ವಾಸಕೋಶವನ್ನು ಹೊಂದಿ ನೆಲದಮೇಲೆ ಬಂದು ಉಸಿರಾಡಿ ಬದುಕುವ ಪ್ರಾಣಿಯಾಗುತ್ತದೆ.

ಹೀಗೆ ವಿಕಾಸವಾದಕ್ಕೆ ಜೀವನದ ಹೋರಾಟ ಮತ್ತು ಅನುವಂಶೀಯವಾಗಿ ಬಂದ ಸಂಕಲ್ಪಗಳೇ ಮುಖ್ಯ ಕಾರಣವೆಂಬುದು ಈಗಿನ ವರೆಗೆ ಗೊತ್ತಾಗಿದೆ. ಆದರೂ ಇನ್ನೂ ನಾವು ಸೃಷ್ಟಿನಿಯಮವನ್ನು ಅರ್ಥಮಾಡಿಕೊಂಡಿರುವುದು ಅಸಂಪೂರ್ಣವಾಗಿದೆ. ಮಾನವನ ಜ್ಞಾನ ವೃದ್ಧಿಯಾದಂತೆ ಈ ರಹಸ್ಯದ ಗುಟ್ಟು ಒಡೆಯುತ್ತದೆ. ಹೊಸಹೊಸ ವಿಷಯಗಳು

ಗೊತ್ತಾಗುತ್ತವೆ. ಆದರೂ ನಮಗೀಗ ತಿಳಿದಿರುವ ಆಧಾರದ ಮೇಲೆ ಅಮೀಬಾದಿಂದ ಮನುಷ್ಯನವರೆಗೂ ಆಗಿರುವ ಅಭಿವೃದ್ಧಿಯ ಸರಪಣಿಯನ್ನು ನಾವು ಕಾಣಬಹುದು.

ಈ ಬದಲಾವಣೆಯ ಸರಪಣಿ ಇನ್ನೂ ಕೊನೆಗೊಂಡಿಲ್ಲ. ಅದರ ಬದಲಾವಣೆಯ ಕೊಂಡಿಗಳಿನ್ನೂ ತಯಾರಾಗುತ್ತಲೇ ಇವೆ. ಇನ್ನೊಂದು ೫೦,೦೦೦ ವರ್ಷಗಳಲ್ಲಿ ಪ್ರಪಂಚದಲ್ಲಿ ಇನ್ನೇನೇನು ಬದಲಾವಣೆಗಳಾಗಬಹುದೊ! ಹಿಂದೆ ಕಿಂಚಿತು ಬದಲಾವಣೆಗೂ ಲಕ್ಷಾಂತರ ವರ್ಷ ಬೇಕಾಗಿರುವಾಗ ಈಗೇನು ೫೦,೦೦೦ ವರ್ಷದಲ್ಲಿ ಅಂತಹ ಬದಲಾವಣೆಯೇ ಎಂದು ಆಶ್ಚರ್ಯವಾಗಬಹುದು. ಆದರೆ ಹಿಂದಿನ ಪ್ರಾಣಿ ತನ್ನ ಜೀವಮಾನಕ್ಕೆಲ್ಲ ಒಂದು ವ್ಯವಸ್ಥಿತವಾದ ಯೋಜನೆಯನ್ನು ತಯಾರಿಸಿಕೊಂಡು ಅದನ್ನು ಸಾಧಿಸಬೇಕೆಂಬ ಮಹತ್ಸಂಕಲ್ಪ ಹೊಂದಿರಲಿಲ್ಲ. ಆದರೆ ಮಾನವನ ಜ್ಞಾನ ಅಗಾಧವಾಗಿ ಬೆಳೆದಿದೆ. ಇಂದಿನ ಮಾನವನು ಮುಂದಿನ ಸಾವಿರ ವರ್ಷದ ಯೋಜನೆಯನ್ನು ಸಾಧಿಸಲು ಸಂಕಲ್ಪ ಹೊಂದಿರುವನು.

## ಉತ್ಕ್ರಾಂತಿವಾದ

ಪ್ರಾಣಿಗಳಲ್ಲಾದ ಉತ್ಕ್ರಾಂತಿ ಹೇಗಾಯಿತು ಎಂಬುದಕ್ಕೆ ಒಂದೆರಡು ಉದಾಹರಣೆಯನ್ನು ನೋಡಿ ಈ ಅಧ್ಯಾಯವನ್ನು ಮುಗಿಸೋಣ. ಆನೆ, ಕುದುರೆ, ಒಂಟೆ ಈ ಪ್ರಾಣಿಗಳ ಪೂರ್ವ ಪೀಳಿಗೆಯಲ್ಲಾದ ಮಾರ್ಪಾಡನ್ನು ನೋಡಿದರೆ ವಿಕಾಸವಾದದ ತಿಳುವಳಿಕೆ ಸ್ಪಷ್ಟವಾದೀತು. ಇದನ್ನು ವಿವರವಾಗಿ ತಿಳಿಯುವುದು ತುಂಬಾ ಸ್ವಾರಸ್ಯವಾದ ವಿಷಯ. ಅದನ್ನಿಲ್ಲಿ ತುಂಬಾ ಸಂಕ್ಷೇಪವಾಗಿ ಹೇಳಿದೆ.

ಆನೆ ಕುದುರೆಗಳ ಪೂರ್ವ ಪೀಳಿಗೆ ಮೊದಲು ಹೇಗಿದ್ದವು, ಆಮೇಲೆ ಬರುತ್ತ ಬರುತ್ತ ಹೇಗೆ ಮುಂದಿನ ಪೀಳಿಗೆಯಲ್ಲಿ ಕಿಂಚಿತು ಕಿಂಚಿತು ಅಪ್ರತ್ಯಕ್ಷವಾಗಿ ಬದಲಾವಣೆಯಾಗಿ ಈಗಿನಂತೆ ಆದವು ಎಂಬುದನ್ನು ಮುಂದಿನ ಚಿತ್ರಗಳಲ್ಲಿ ಕಾಣಬಹುದು.



ಈ ಚಿತ್ರದಲ್ಲಿರುವ ಪ್ರಾಣಿಯ ಮೂತಿಯನ್ನೂ ಕಾಲಿನ ಉಗುರುಗಳನ್ನೂ ನೋಡಿದರೆ ಇದು ಆನೆಯೆಂದು ಹೇಳಲಾಗುವುದಿಲ್ಲ. ಆದರೆ ಈ ಪ್ರಾಣಿಯೇ ಈಗಿನ ಆನೆಗಳ ಪೂರ್ವಪ್ರಾಣಿಗಳಲ್ಲಿ ಒಂದು.



ಈ ಪ್ರಾಣಿ ಆನೆಯನ್ನು ಹತ್ತಿರ ಹತ್ತಿರ ಹೋಲುತ್ತದೆ. ಆದರೆ ಮೂತಿಯ ಮಾಟದಲ್ಲಿ ವ್ಯತ್ಯಾಸವಿದೆ. ಮೊದಲ ಪ್ರಾಣಿಗಿಂತ ಇದು ಈಗಿನ ಆನೆಗೆ ಹತ್ತಿರದ ಸಂಬಂಧಿ.



ಈ ಪ್ರಾಣಿ ಆನೆ ಯಂತೆಯೇ ಇದೆ ಆದರಿನ್ನೂ ಮೂತಿಯಲ್ಲಿ ವ್ಯತ್ಯಾಸ



ಇದು ಈಗಿನ ಆನೆಗಳಲ್ಲಿ ಒಂದು



ಈ ಪ್ರಾಣಿ ಕುದುರೆಯ ಬಹುದೂರದ ಪೂರ್ವಪ್ರಾಣಿಗಳಲ್ಲಿ ಒಂದು



ಕಾಲಕ್ರಮದಲ್ಲಿ ಮೊದಲನೆ ಪ್ರಾಣಿಯ ಪೀಳಿಗೆಯಲ್ಲಾದ ಮಾರ್ಪಾಡನ್ನು
ಈ ಪ್ರಾಣಿಯಲ್ಲಿ ಸೂಕ್ಷ್ಮವಾಗಿ ಕಾಣಬಹುದು.



ಹಿಂದಿನ ಪ್ರಾಣಿಯ ಮುಂದಿನ ಪೀಳಿಗೆಯೊಂದರಲ್ಲಾದ ಮಾರ್ಪಾಡನ್ನು ಈ ಪ್ರೌಣಿಯಲ್ಲಿ ಕಾಣಬಹುದು. ಆದರಿನ್ನೂ ಈ ಪ್ರಾಣಿ ಕಾಲು ಬಾಲ ಮೊದಲಾದ ಅಂಗಗಳಲ್ಲಿ ಕುದುರೆಗಿಂತ ತುಂಬಾ ವ್ಯತ್ಯಾಸವಾಗಿದೆ.



ಇದು ಈಗಿನ ಕುದುರೆ




ಇಲ್ಲಿ 1 ನೆ ಚಿತ್ರದಲ್ಲಿ ಕಿಟಕಿ ತೆಗೆಯಲು ಪ್ರಾರಂಭ. ಪೂರ್ಣ ತೆಗೆದಿರುವುದು 48 ನೆ ಚಿತ್ರದಲ್ಲಿ. ಆದರೆ 1 ನೆ ಚಿತ್ರಕ್ಕೂ 2 ನೆ ಚಿತ್ರಕ್ಕೂ ನಮಗೆ ವ್ಯತ್ಯಾಸವೇ ಕಾಣುವುದಿಲ್ಲ ಆದರೂ ವ್ಯತ್ಯಾಸವಿದೆ. ಹೀಗೆಯೇ ಸೂಕ್ಷ್ಮವ್ಯತ್ಯಾಸವಾಗಿ 1 ನೆ ಚಿತ್ರಕ್ಕೂ 48 ನೆ ಚಿತ್ರಕ್ಕೂ ಸಂಪೂರ್ಣ ವ್ಯತ್ಯಾಸ ಕಾಣುತ್ತೇವೆ.



ಈ ಪ್ರಾಣಿಗಳಲ್ಲಿ ಪರಿಸ್ಥಿತಿಗನುಸಾರವಾಗಿ ಆದ ಬದಲಾವಣೆ ಪೀಳಿಗೆ ಪೀಳಿಗೆಗೂ ಗೊತ್ತಾಗುವಂತಿರಲಿಲ್ಲ. ಕ್ರಮೇಣ, ಕಿಂಚಿತು ಕಿಂಚಿತು ಅಪ್ರತ್ಯಕ್ಷವಾಗಿ ಆಯಿತು. ಇಲ್ಲಿಕೊಟ್ಟಿರುವ ಆನೆ ಮತ್ತು ಕುದುರೆಯ ಚಿತ್ರಗಳಲ್ಲಿ ಕಾಣುವಂತೆ ಒಂದು ಚಿತ್ರಕ್ಕೂ ಅದರ ಮುಂದಿನ ಚಿತ್ರಕ್ಕೂ ಕಾಣುವ ಭೇದದಷ್ಟು ಬದಲಾವಣೆಯಾಗಬೇಕಾಗಿದ್ದರೆ ಸುಮಾರು ಕೋಟಿ ವರ್ಷಗಳು ಉರುಳಿರಬೇಕು. ಅದೆಷ್ಟೋ ಪೀಳಿಗೆಗಳು ಕಳೆದಿರಬೇಕು!

ಈ ಬದಲಾವಣೆಯ ಕ್ರಮವನ್ನು ತಿಳಿದುಕೊಳ್ಳುವುದು ಮನೋರಂಜಕವಾದ ವಿಷಯ. ಇಲ್ಲಿ ಒಂದು ಉದಾರಣೆ ಕೊಟ್ಟರೆ ಒಳ್ಳೆಯದೆಂದು ಕಾಣುತ್ತದೆ. ಸಿನಿಮ ಫಿಲಂನ್ನು ತೆಗೆದುಕೊಳ್ಳೋಣ. ಅದನ್ನು ನೋಡಿರುವವರು ವಿಷಯವನ್ನು ಚೆನ್ನಾಗಿ ತಿಳಿಯಬಹುದು. ಒಬ್ಬ ಮನುಷ್ಯ ಕಿಟಕಿ ತೆರೆಯುವುದನ್ನು ಪರದೆಯ ಮೇಲೆ ತೋರಿಸಬೇಕಾದರೆ ಸುಮಾರು ಮೂರು ಅಡಿ ಉದ್ದ ಫಿಲಂನಲ್ಲಿ ಚಿತ್ರ ತೆಗೆಯಬೇಕಾಗುತ್ತದೆ. ಅದರಲ್ಲಿ ೪೮ ಚಿತ್ರ ಗಳಿರುತ್ತವೆ. ಫೀಂನಲ್ಲಿರುವ ಚಿತ್ರಗಳನ್ನು ನೋಡಿದರೆ ಒಂದು ಚಿತ್ರಕ್ಕೂ ಮತ್ತೊಂದು ಚಿತ್ರಕ್ಕೂ ಏನೂ ವ್ಯತ್ಯಾಸ ಕಾಣುವುದಿಲ್ಲ. ಆದರೆ ಚಿತ್ರಮಂದಿರಗಳಲ್ಲಿ ಯಂತ್ರಕ್ಕೆ ಕೊಟ್ಟು ಭರದಿಂದ ಜಾರುವಂತೆ ಮಾಡಿದರೆ ಪರದೆಯಮೇಲೆ ಕಿಟಕಿ ತೆರೆಯುವುದು ಕಾಣುತ್ತದೆ. ನಮಗಂತು ಅದೆಷ್ಟುದ್ದ ಫಿಲಂ ಕಳೆಯಿತು ಅದೆಷ್ಟು ಚಿತ್ರಗಳು ಉರುಳಿದವು ಗೊತ್ತಾಗುವುದಿಲ್ಲ. ಹಾಗೆಯೇ ಈ ವಿಕಾಸತೆಯ ಮಾರ್ಪಾಡು ಕೂಡ. ಒಂದು ಪೀಳಿಗೆಯಿಂದ ಮುಂದಿನ ಪೀಳಿಗೆಯಲ್ಲಾದ ವ್ಯತ್ಯಾಸ ಅಥವಾ ಮಾರ್ಪಾಡು ಫಿಲಂನಲ್ಲಿರುವ ಒಂದು ಚಿತ್ರದಿಂದ ಮುಂದಿನ ಚಿತ್ರದಲ್ಲಾದ ವ್ಯತ್ಯಾಸದಂತೆ, ಸೂಕ್ಷ್ಮಪರೀಕ್ಷೆಗೂ ಗೊತ್ತಾಗದುದು. ಅಷ್ಟು ಕೊಂಚ ಮಾರ್ಪಾಡು ಅದು. ಈ ಕಿಂಚಿತು ಕಿಂಚಿತುಮಾರ್ಪಾಡೇ ತಲತಲಾಂತರದಲ್ಲಿ ದೊಡ್ಡದಾಗಿ ಎಷ್ಟೋಲಕ್ಷ ಪೀಳಿಗೆಯ ಅಂತರದಲ್ಲಿ ಎಷ್ಟೋ ಕೋಟಿ ವರ್ಷಗಳಲ್ಲಿ ದೃಷ್ಟಗೊಳ್ಳುತ್ತದೆ. ಆಗಮಾತ್ರ ಮೊದಲ ಪೀಳಿಗೆಗೂ ಕೊನೆಯಪೀಳಿಗೆಗೂ ಸ್ಪಷ್ಟವಾದ ಭೇದಕಾಣುತ್ತದೆ.

ಪ್ರಕೃತಿ ಕಾರ್ಯದಲ್ಲೇ ವಿಕಾಸವನ್ನು ತಿಳಿಯಬೇಕಾದರೆ ಪಿಂಡ ಬೆಳವಣಿಗೆಯನ್ನು ಅರಿಯಬೇಕು. ಪಿಂಡ ಬೆಳವಣಿಗೆಯಲ್ಲಿ ಆ ಪ್ರಾಣಿ ವರ್ಗ ಜೀವಾಣುವಿನಿಂದ ದಾಟಿ ಬಂದಿರುವ ಪರಿವರ್ತನೆಯನ್ನು ಸಂಕ್ಷೇಪವಾಗಿ ಕಾಣಬಹುದು. ಉದಾಹರಣೆಗೆ ಇಲ್ಲಿ ಪ್ರಾಣಿಯ ಪಿಂಡ ಬೆಳವಣಿಗೆಯ ಚಿತ್ರವನ್ನು ಕೊಟ್ಟಿದೆ. ಒಂದು ಮನುಷ್ಯಪಿಂಡ. ಮತ್ತೊಂದು




ಮೀನು, ಕೋಳಿ, ಕರು, ಮೊಲ, ಮನುಷ್ಯ,
ಪಿಂಡ ಬೆಳವಣಿಗೆಯ ನಾಲ್ಕು ಹಂತಗಳನ್ನು ತೋರಿಸಿದೆ.



6

ಮೊಲದ ಪಿಂಡ. ಮಿಕ್ಕವು ಕರು, ಕೋಳಿ, ಮಾನುಗಳ ಪಿಂಡಗಳು. ಈ ಎಲ್ಲದರ ಬೀಜ ಜೀವಾಣು ಒಂದೇರೀತಿಯಾಗಿದ್ದರೂ ಭ್ರೂಣವು ಗರ್ಭದಲ್ಲಿ ಬೆಳೆಯುತ್ತ ಬದಲಾವಣೆ ಹೊಂದುತ್ತದೆ. ಮೊದ ಮೊದಲು ಬದಲಾವಣೆ ಒಂದೇರೀತಿಯಾಗಿದ್ದು ಯಾವುದು ಯಾವುದರದು ಎಂದು ಹೇಳುವುದೂ ಕಷ್ಟವಾಗುವಷ್ಟು ಹೋಲಿಕೆ ಇದೆ. ಹೀಗೆ ಪಿಂಡಗಳು ಪ್ರಾರಂಭದಲ್ಲಿ ಒಂದೇರೀತಿಯಿದ್ದು, ಬೆಳೆದಂತೆ ಅದರದರ ಜಾತಿಪ್ರಾಣಿಯ ಆಕೃತಿಯನ್ನು ಹೊಂದುತ್ತದೆ. ಪಿಂಡ ಬೆಳವಣಿಗೆಯಲ್ಲಿ ಆ ಪ್ರಾಣಿ ಯಾವ ಯಾವ ರೂಪಿನಿಂದ ಪರಿಣಾಮಗೊಂಡು ಬಂದಿದೆ ಎಂಬುದನ್ನು ಕಾಣಬಹುದು. ಪಿಂಡ ಬೆಳವಣಿಗೆ ವಿಕಾಸನದ ಪುನರಾವೃತ್ತಿಯನ್ನು ತೋರಿಸುತ್ತದೆ. ಇದರಿಂದ ಆದಿಯ ಜೀವಾಣುಗಳು ಕಾಲಕ್ರಮದಲ್ಲಿ ಕಾಲ ದೇಶ ಸನ್ನಿವೇಶಗಳನ್ನನುಸರಿಸಿ ಪರಿವರ್ತನೆಗೊಂಡು ದೇಹರಚನೆಯಲ್ಲೂ ಮನಸ್ಸಿನ ಬೆಳವಣಿಗೆಯಲ್ಲೂ ವೈವಿಧ್ಯತೆಯನ್ನು ಪಡೆದು ಪ್ರಾಣಿಕೋಟಿ ಯಾದವು ಎಂಬುದು ಸ್ಪಷ್ಟವಾಗಿದೆ. ಈ ವಿಕಾಸವಾದವನ್ನು ಎಲ್ಲರಿಗೂ ತಿಳಿಯುವಂತೆ ಸ್ಪಷ್ಟಪಡಿಸಿದವರು ವಿಜ್ಞಾನಿ ಚಾರ್ಲ್ಸ್ ಡಾರ್ವಿನ್ ಎಂಬುವರು. ಈ ಜ್ಞಾನವನ್ನು ನಮಗೆ ತಿಳಿಸಿಕೊಟ್ಟ ತಪಸ್ವಿ ಡಾರ್ವಿನ್ ರವರರಿಗೆ ಮಾನವಕೋಟಿ ಚಿರಋಣಿಯಾಗಿದೆ.

ಡಾರ್ವಿನ್ನರು ತಮ್ಮ ವಿಕಾಸವಾದವನ್ನು ಸ್ಪಷ್ಟಪಡಿಸಿದಾಗ ಹಳೆಯ ಸೃಷ್ಟಿವಾದದಲ್ಲಿ ನಂಬಿಕೆ ಇದ್ದವರು ಬೆಚ್ಚಿದರು. ಸಾಧಾರಣರು ಆಶ್ಚರ್ಯ ಗೊಂಡರು. ಎಲ್ಲೆಲ್ಲೂ ಗುಲ್ಲೆದ್ದಿತು. ಆದರೆ ಶಾಸ್ತ್ರಜ್ಞರು ಆ ವಾದ ವನ್ನು ಎಚ್ಚರಿಕೆಯಿಂದ ಪರೀಕ್ಷಿಸಿ ಒಪ್ಪಿಕೊಂಡರು. ಈಗ ಆ ವಾದದಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾಗಿದ್ದರೂ ಅದನ್ನೇ ಒಪ್ಪಬೇಕಾಗಿದೆ. ಡಾರ್ವಿ ನ್ನರ ಹೆಸರು ಪ್ರಪಂಚದ ಇತಿಹಾಸದಲ್ಲಿ ಚಿರನಾಗಿ ಉಳಿಯುತ್ತದೆ. ಕಾರಣ, ಅವರೇ ಸೃಷ್ಟಿಯ ನಿಯಮವನ್ನು ಸಮಂಜಸವಾಗಿ ತಿಳಿಸಿ ಕೊಟ್ಟವರು.



ಚಾರ್ಲ್ಸ್ ರಾಬರ್ಟ್ ಡಾರ್ವಿನ್ (ಜನನ ೧೮೦೯—ಮರಣ ೧೮೮೨)

ಮನುಷ್ಯನೆ ಇಲ್ಲದಿದ್ದಾಗ ನಡೆದ ವಿಷಯಗಳ ಕಥೆ ಹೇಗೆ ಗೊತ್ತಾಯಿತು? ಪ್ರಕೃತಿ ಪುಸ್ತಕದಲ್ಲಿ ಇದೆಲ್ಲ ಬರೆದಿಡಲಾಗಿದೆ. ಭೂಗರ್ಭದಲ್ಲಿರುವ ಬಂಡೆಗಳು ಕಲ್ಲಿದ್ದಲ ಗಣಿಗಳು, ಬೆಟ್ಟ, ನದಿಗಳು ಪ್ರಕೃತಿ ಪುಸ್ತಕದ ಎಲೆಗಳು. ಆ ಬರಹಗಳನ್ನು ಓದಲು ಸಾಮಾನ್ಯರಿಂದ ಸಾಧ್ಯವಿಲ್ಲ. ಡಾರ್ವಿನ್ ರವರಂತಹ ಜಾಣ ವೈಜ್ಞಾನಿಗಳಿಗೆ ಮಾತ್ರ ಅದು ಸಾಧ್ಯ.

ವಿಜ್ಞಾನಿಗಳು ಈ ಬಂಡೆಗಳ ಪದರಗಳನ್ನು ಪರೀಕ್ಷಿಸಿದ್ದಾರೆ. ಅಲ್ಲಿ ಸಿಗುವ ಪಳೆಯುಳಿಕೆಗಳನ್ನು ಪರೀಕ್ಷಿಸಿ ಸಂಶೋಧನೆ ನಡೆಸಿ ನಾವು ತಿಳಿದುಕೊಳ್ಳುವಂತೆ ಹೇಳಿದ್ದಾರೆ. ಹಿಂದೆ ಬಾಳಿ ಅಳಿದ ಪ್ರಾಣಿಗಳ ಅವಶೇಷಗಳು

ಆ ಕಲ್ಲಿನ ಪದರಗಳಲ್ಲಿ ಸಿಕ್ಕಿವೆ. ಅವಶೇಷ ಹಿಂದೆ ಹೇಗೋ ಆ ಕಲ್ಲಿನ ಪದರಗಳ ಮಧ್ಯೆ ಸೇರಿ ಅವುಗಳ ಅಸ್ಥಿಪಂಜರ ಆ ಕಲ್ಲಿನ ಮೇಲೆ ಗುರುತು ಬಿಟ್ಟವೆ. ಈ ಕಲ್ಲಿನ ಪದರಗಳೇ ಭೂಮಿಯ ಕಥೆಗೂ ಆಧಾರ. ತಿಳಿಯ ಹೊರಟರೆ ಸ್ವಾರಸ್ಯವಾದ ವಿಷಯವದು.

## ಒಂದು ಪ್ರಶ್ನೆ

ಈ ಅಧ್ಯಾಯವನ್ನು ಮುಗಿಸುವ ಮೊದಲು ಒಂದು ಪ್ರಶ್ನೆಗೆ ಉತ್ತರ ಕಂಡು ಹಿಡಿಯಬೇಕಾಗಿದೆ. ಈ ಪರಿಣಾಮವಾದವು ನಿಜವಿರುವುದಾದರೆ ಕೆಲವು ಪ್ರಾಣಿಗಳು ಮೆಟ್ಟಲಿಂದ ಮೆಟ್ಟಲಿಗೇರಿ ಉತ್ತಮಗೊಂಡು ಮಾನವ ಮೆಟ್ಟಲನ್ನು ಏರಿದಾಗ ಉಳಿದವು ಕೆಳಗಿನ ಮೆಟ್ಟಲಿನಲ್ಲೋ, ಇಲ್ಲ ಎಲ್ಲೋ ಮಧ್ಯದಲ್ಲೋ ಏಕೆ ಉಳಿದಿರಬೇಕು? ಅಮೀಬಾದಂತಹ ಜೀವಕಣ ದಿಂದಲೇ ಎಲ್ಲ ಉದ್ಭವಿಸಿರುವುದಾದರೆ ಅಮೀಬಾ ಇನ್ನೂ ಹಾಗೆಯೇ ಇದೆಯಲ್ಲ? ಮನುಷ್ಯನೆಂಬ ಒಂದು ಪ್ರಾಣಿಮಾತ್ರ ಮಿಕ್ಕೆಲ್ಲವನ್ನೂ ಮೀರಿನಿಂತು ಯಶಸ್ವಿಯಾಗಲು ಕಾರಣವೇನು?

ಮೊದಲಿನ ಪ್ರಶ್ನೆಗೆ ಉತ್ತರ ಮತ್ತೊಂದು ಪ್ರಶ್ನೆಯಾಗಿ ನಮ್ಮ ಮುಂದೆ ನಿಲ್ಲುತ್ತದೆ. ಮಂಗ ಮಾನವನಾದುದೇನೋ ಆಯಿತು. ಆದರೂ ಮಾನವರಲ್ಲೇ ವೈವಿಧ್ಯವಿದೆಯಲ್ಲ? ಅನಾಗರಿಕರಾದ ಕಾಡುಜನರಿನ್ನೂ ಇರುವರಲ್ಲ? ಇದೇಕೆ? ಹಿಂದೆ ಹೇಳಿದೆ ಸನ್ನಿವೇಶಕ್ಕೆ ಹೊಂದಿ ಕೊಂಡು ಪ್ರಾಣಿಯಾಗಲಿ ಮನುಷ್ಯನಾಗಲಿ ಬದುಕಬೇಕಾಗುತ್ತದೆ, ಎಂದು. ಈ ಬದುಕಿನ ಹೋರಾಟಕ್ಕೆ ನಿಂತ ಪ್ರಾಣಿಮಾತ್ರ ಉತ್ತಮಗೊಂಡು ಮುಂದುವರಿಯುತ್ತದೆ. ಇಲ್ಲದೆ ಸೋಮಾರಿಯಾಗಿರುವುದು ಅಳಿಯು ತ್ತದೆ. ಇಲ್ಲವೇ ತಾನಿದ್ದಲ್ಲೇ ಇರುತ್ತದೆ. ಅನಾಗರಿಕರಾದ ಕಾಡುಜನರು ತಾವಿದ್ದ ಕಾಡುಭಾಗದಲ್ಲಿ ಬೇಟೆ ಮುಗಿದರೆ ಬೇಟೆ ಸಿಗುವ ಬೇರೆ ಕಡೆಗೆ ಹೋಗುತ್ತಾರೆ. ಅದರಿಂದ ಅವರು ಬೇಟೆಗಾರ ಕಾಡುಜನರಾಗಿ ಮಾತ್ರವೇ ಉಳಿಯುತ್ತಾರೆ. ಜೀವನದ ಮಾರ್ಗ ಒಂದು ತಪ್ಪಿದರೆ ಕಣ್ಮುಚ್ಚಿ

ಸೋಮಾರಿಯಾಗಿ ಕುಳಿತರೆ ಸಾವೇ ಸಿದ್ಧ. ಅದೇ ಅಭಿವೃದ್ಧಿಗೆ ಚರಮ ಗೀತೆ. ಬೇಟೆ ಮುಗಿದೊಡನೆ ಮತ್ತಾವುದಾದರು ಉತ್ತಮರೀತಿಯ ಜೀವನ ಸಾಗಿಸಲು ಹೆಣಗುವ ಮನುಷ್ಯನ ಬುದ್ಧಿ ವಿಕಾಸವಾಗುತ್ತದೆ. ಹೊಸಮಾರ್ಗ ಸಿಗುತ್ತದೆ. ಜೀವನ ಉತ್ತಮಗೊಳ್ಳುತ್ತದೆ. ಅವನ ಮುಂದಿನ ವಂಶಿಕರು ಅದನ್ನನುಸರಿಸಿ ನಾಗರಿಕರಾಗಿ ಬೆಳೆಯುತ್ತಾರೆ. ಇಲ್ಲಿ ಅಭಿವೃದ್ಧಿ ಎಂಬುದು ತಪ್ಪಿಸಿಕೊಳ್ಳಲಾಗದಿರುವ ಆವಶ್ಯಕತೆ. ಹಾಗೆಯೇ ಸ್ಥಿತಿ. ಹಾಗಾಗಬೇಕಾದುದೇ ಸಹಜ ವಾದುದು.

ಈಗ ಮತ್ತೆ ಮನುಷ್ಯನು ಮೊದಲು ಕಾಣಿಸಿಕೊಂಡ ದಿನಗಳಿಗೆ ಹೋಗೋಣ. ಆ ದಿನಗಳು ಇಂದಿಗೆ ಎಷ್ಟುಹಿಂದೆ ಎಂಬುದನ್ನು ಯಾರೂ ಹೇಳಲಾರರು. ವಿಜ್ಞಾನಿಗಳ ಊಹೆಯಂತೆ ಅದು ೫,೦೦,೦೦೦ ವರ್ಷ ಗಳಿಂದ ಹತ್ತು ಲಕ್ಷದ ವರೆಗೂ ಹಿಂದೆ ಹೋಗುತ್ತದೆ. ಇದಕ್ಕಿಂತಲೂ ಹಿಂದೆ ಇದ್ದರೂ ಇದ್ದಿರಬಹುದು.

ಈ ವಿಷಯಕ್ಕೆ ಸಿಕ್ಕುವ ಆಧಾರಗಳಲ್ಲಿದೇಹದ ಮೂಳೆಗಳಿ ಗಿಂತಲೂ ಅತಿ ಪ್ರಾಚೀನವಾದವು ಅವನ ಆಯುಧಗಳು. ಈ ಆಯುಧ ಗಳು ಬೆಣಚು ಕಲ್ಲುಗಳಿಂದಲೋ ಅಥವಾ ಅದಕ್ಕೆ ಸಮನಾದ ಇನ್ನಾವ ಕಲ್ಲುಗಳಿಂದಲೋ ತಯಾರಾಗಿದ್ದುದರಿಂದ ಮೊದಲನೆಯ ಮನುಷ್ಯನನ್ನು ಪ್ರಾಚೀನ ಶಿಲಾಯುಗದವನೆಂದು ಹೇಳುತ್ತಾರೆ.





ಮಾನವನು ಮಿಕ್ಕೆಲ್ಲ ಪ್ರಾಣಿಗಳ ನಾಯಕನಾಗುವ ಅದೃಷ್ಟವಿತ್ತು
ಮಾನವನ ತವರೂರು

ಮಾನವ ಕುಲದ ಮೊತ್ತಮೊದಲಿನ ತವರೂರಿನ ಪ್ರದೇಶಗಳ ವಿಚಾರದಲ್ಲಿ ಊಹೆಗಳನ್ನು ಮಾಡುವುದು ಬಹಳ ರಮ್ಯವಾದುದು. ಕಾಡುಕೋತಿಗಳು ಅನೇಕ ಬಗೆಯವು ವಾಸಮಾಡುತ್ತಿದ್ದುದರಿಂದ ಉತ್ತರ ಹಿಂದೂಸ್ಥಾನ ಮೊತ್ತಮೊದಲಿನ ಮನುಷ್ಯನ ವಾಸಸ್ಥಳವಾಗಿತ್ತೆಂದು ಮೊನ್ನೆ ಮೊನ್ನೆಯವರೆಗೂ ವಿಜ್ಞಾನಿಗಳು ತರ್ಕಿಸಿದರು. ಆದರೆ ಮನುಷ್ಯನಿಗೆ ಹತ್ತಿರ ಬಂಧುವಾದ ಎಲ್ಲ ದೊಡ್ಡಮಂಗಗಳೂ ವಾಸಿಸುವ ಆಫ್ರಿಕ ಈಗ ಉತ್ತಮ ದೃಷ್ಟಾಂತವಾದೀತು. ಈಗ ಕೆನ್ಯದಲ್ಲಿ ಸಿಗುವ ಪ್ರೋಪಿಯಾ ಪಿಥಿಯನ್ ಮಂಗಗಳು ಮೊದಲನೆಯ ಮಂಗ ಮನುಷ್ಯನ ಪ್ರತಿಕೃತಿ.

ಆಮೇಲಾಮೇಲೆ ಈ ಮನುಷ್ಯ ಪ್ರಾಣಿಗಳ ನಿವಾಸ ಪಶ್ಚಿಮ ಏಷ್ಯಾ ಅಥವಾ ಅದರ ಅಕ್ಕಪಕ್ಕ ಪ್ರದೇಶವಾಗಿರಬೇಕು. ಶಾಖಾಹಾರಕ್ಕೆ ಮಾತ್ರ ಆ ಪ್ರಾಣಿಗಳ ಹಲ್ಲುಗಳು ಹುಟ್ಟಿದ್ದುದರಿಂದ ಅವು ಸಂಪೂರ್ಣ ಶಾಖಾಹಾರಿಗಳಾಗಿರಬೇಕು. ಅಂತಹ ಆಹಾರ ಆಗ ಸಿಗುತ್ತಿದ್ದುದು ಸಮಶೀತೋಷ್ಣವಲಯದಲ್ಲಿ; ಅಲ್ಲಿಯೇ ಅವನ ಅಭಿವೃದ್ಧಿಯಾಗಿರಬೇಕು. ಈ ಪ್ರಾಚೀನ ಕಾಲದ ಮನುಷ್ಯಪ್ರಾಣಿಗೂ ಇತರ ಪ್ರಾಣಿಗಳಿಗೂ ಸಂಬಂಧವನ್ನು ಕಲ್ಪಿಸುವ ಪೂರ್ವ ಪ್ರಾಣಿಗಳ ವಿಚಾರ ನಿಷ್ಕೃಷ್ಟವಾಗಿ ನಮಗೇನೂ ತಿಳಿದಿಲ್ಲ. ಆ ಪೂರ್ವ ಪ್ರಾಣಿಗಳ ಕಾಲುಗಳು ಬಲವಾಗಿದ್ದರೂ ಚಿಂಪಾಂಜಿ ಅಥವಾ ಗೋರಿಲ್ಲಾದ ಹಿಂಗಾಲುಗಳನ್ನೇ ಹೋಲುತ್ತಿದ್ದವು. ಹೀಗಿದ್ದ ವಾನರ ಪ್ರಾಣಿಯೇ ಆಪೂರ್ವಿಕನಾಗಿತ್ತೆಂದು ಹೇಳಿದರೆ ಅದು ಅಸಂಭವವೇನೂ ಆಗಲಾರದು.

## ಅರೆಮಾನವ

ವಾನರ ಅವಸ್ಥೆ ಕಳೆದು ಅರೆಮಾನವ ಅವಸ್ಥೆಗೆ ಬಂದರೆ, ಆ ಪ್ರಾಣಿ ವಾನರನೂ ಅಲ್ಲ ಮನುಷ್ಯನೂ ಅಲ್ಲ. ಸ್ವಲ್ಪ ಹೆಚ್ಚು ಕಡಿಮೆ



ಪ್ರಾಚೀನ ಶಿಲಾಯುಗದ ಜನರು ಬಳಸುತ್ತಿದ್ದ ಕಲ್ಲಿನ ಆಯುಧಗಳು

ಆಕೃತಿ ವಾನರನನ್ನೇ ಹೋಲುವುದಾದರೂ ಬುದ್ಧಿ ವಾನರನ ಬುದ್ಧಿಗಿಂತ ಬೆಳೆದಿತ್ತು. ಇತರ ಭಯಂಕರ ಪ್ರಾಣಿಗಳೊಡನೆ ಹೋಲಿಸಿದರೆ ನಿರ್ಬಲ ನಾದ ಆ ಮಾನವ, ಮಿಕ್ಕ ಬಲಯುತ ಮತ್ತು ಕ್ರೂರ ಪ್ರಾಣಿಗಳನ್ನು ಎದು ರಿಸಬೇಕಾಯಿತು. ಹಾಗೆ ಮಾಡಲು ಅವನಿಗೆ ಆಯುಧ ಬೇಕೇಬೇಕಲ್ಲವೆ? ಅವನಿಗೆ ದೊರೆತ ಆಯುಧವೆಂದರೆ ಕಲ್ಲು. ಅದನ್ನೇ ತನ್ನ ವೈರಿಯಕಡೆಗೆ ಬೀರಿ ಹೆದರಿಸಿ ಓಡಿಸುತ್ತಿದ್ದನು. ತಾನೆಸದ ಕಲ್ಲು ಗಂಡಾಂತರವಾಗಿ ತನ್ನ ವೈರಿಗೆ ಅಥವಾ ಬೇಟೆಗೆ ತಾಕುವಂತೆ ಮಸೆದು ಚೂಪುಮಾಡಬೇಕೆಂದು ಆವನ ಬುದ್ಧಿಗೆ ಆಮೇಲೆ ಹೊಳೆಯಿತು. ಹಾಗೆ ಕಲ್ಲಿನಿಂದಲೇ ಚೂಪಾದ ಆಯುಧಗಳನ್ನು ಮಾಡತೊಡಗಿದನು.

ಪ್ರಾಚೀನಕಾಲದಲ್ಲಿ ಮನುಷ್ಯನು ಹೊಟ್ಟೆ ಹೊರೆಯಲು ಬಹಳ ಕಷ್ಟ ಪಡಬೇಕಾಗಿತ್ತು; ಮತ್ತು ಭೂಮಿಯಮೇಲೆ ವಾಸಮಾಡುತ್ತಿದ್ದ ಪ್ರಾಣಿಗಳಲ್ಲೆಲ್ಲ, ಸುತ್ತುವರಿದಿದ್ದ ವಿಪತ್ತುಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಆ ಮನುಷ್ಯಪ್ರಾಣಿ ಅತಿ ನಿರ್ಬಲನಾಗಿದ್ದಿತೆಂದು ಹೇಳಬಹುದು.

ಕಾಡುಗಳು ಘಾತುಕ ಮೃಗಗಳ ಹಾವಳಿಯಿಂದ ತುಂಬಿಹೋಗಿದ್ದವು. ನದಿಗಳು ರಾಕ್ಷಸಾಕಾರದ ರೈನಾಸಿರಸ್ ಮತ್ತು ಹಿಪ್ಪೊಪೊಟಾಮಸ್‌ಗಳಿಂದ ತುಂಬಿಹೋಗಿತ್ತು. ಕತ್ತಲೆಗೂಡಿದ ಗುಹೆಗಳ ಸಂದುಗಳಲ್ಲಿ ಗುಹಾವಾಸಿ ಕರಡಿಗಳೂ, ಸಿಂಹಗಳೂ ಅವಿತುಕೊಂಡಿರುತ್ತಿದ್ದವು. ಭಯಂಕರವಾದ ಹಾಗೂ ಕೋರೆದಾಡೆಗಳಿಂದ ಕೂಡಿದ ಹುಲಿಗಳೂ ತಮ್ಮ ಬೇಟೆಯನ್ನು ಕಾಯುತ್ತಾ ಯಾವಾಗಲೂ ಸಿಕ್ಕಿದ ಪ್ರಾಣಿಯನ್ನು ಹಿಡಿದು ಸೀಳಲು ಹವಣಿಸುತ್ತಿದ್ದವು. ತೋಳಗಳ ಹಿಂಡು, ಪ್ರಾಚೀನಕಾಲದ ಕುದುರೆಗಳು, ಕಾಡುಕರಡಿಗಳು, ಭಯಂಕರವಾದ ವಿಷಸರ್ಪಗಳು ಇವುಗಳೆಲ್ಲದರೊಡನೆ ಅಂದಿನ ಪ್ರಪಂಚ ಮನುಷ್ಯನ ವಾಸವನ್ನು ಅವರ್ಣನೀಯವಾದಷ್ಟು ಭಯಂಕರವನ್ನಾಗಿ ಮಾಡಿತ್ತು. ಅವನು ಅಷ್ಟು ನಿಸ್ಸಹಾಯಕನಾಗಿರುವಂತೆ ಕಾಣುತ್ತಿದ್ದನು.



ಈ ಪ್ರಾಣಿಗಳ ನಡುವೆ ಆಗಿನ ಮಾನವನು ನಿರ್ಬಲನಾಗಿದ್ದನು

ರೈನಾಸಿರಸ್ ಪ್ರಾಣಿಗೆ ದೊಡ್ಡ ಕೋರೆದಾಡೆಗಳಿದ್ದುವು; ಇದರಿಂದ ಸಿಂಹಗಳೂ ಹುಲಿಗಳೂ ಕೂಡಿ ಅದನ್ನು ಎದುರಿಸಿ ನಿಲ್ಲಲು ಭಯಪಡುತ್ತಿದ್ದುವು. ಸರ್ಪಗಳು ತಮ್ಮ ವಿಷತುಂಬಿದ ದಂತದಿಂದ, ತೋಳಗಳು ತಮ್ಮ ಕೋರೆದಾಡೆಯಿಂದ, ಕಾಡುಕೋಣಗಳು ತಮ್ಮ ಕೋಡುಗಳಿಂದ, ಕರಡಿಗಳು ತಮಗಿದ್ದ ಮುಂಗಾಲುಗಳಿಂದ ತಮ್ಮ ವೈರಿಯನ್ನು ಎದುರಿಸುತ್ತಿದ್ದವು. ವೈರಿಗಳನ್ನು ಪ್ರತಿಭಟಿಸಿ ನಿಲ್ಲಲು ಆವಶ್ಯಕವಾದ ಬಲಯುತ ಆಯುಧಗಳಿಲ್ಲದ ಪ್ರಾಣಿಗಳಿಗೆ ಬಹಳ ಚುರುಕಾದ ಕಾಲುಗಳಿದ್ದುವು. ಇದರಿಂದ ಅವು ತಮ್ಮ ಶತೃಗಳನ್ನು ವಿಾರಿಸಿ ಓಡಿಬಿಡುತ್ತಿದ್ದುವು. ಮೊಲಗಳು ಕೂಡ ತಮ್ಮ ಬಿಲಗಳಲ್ಲಿ ಸುಖವಾಗಿರುತ್ತಿದ್ದವು. ಕಾಡುಬೆಕ್ಕುಗಳೂ, ಮಂಗಗಳೂ ಮರಗಳ ಮೇಲೆ ನಿರ್ಭಯದಿಂದಿರುತ್ತಿದ್ದವು. ಜಲಚರಗಳು ನದಿ, ಸರೋವರ, ಸಾಗರಗಳಲ್ಲೂ ಹಕ್ಕಿಗಳು ಆಕಾಶದಲ್ಲೂ ಸುಖವಾಗಿ ಕಾಲ ಕಳೆಯುತ್ತಿದ್ದವು. ಆ ಪ್ರಾಚೀನ ಮನುಷ್ಯಪ್ರಾಣಿಯ ಹೊರತು ಮಿಕ್ಕೆಲ್ಲ ಪ್ರಾಣಿಯೂ ನಿರಾತಂಕವಾಗಿರಲು ಏನಾದರೊಂದು ಅನುಕೂಲವಿತ್ತು. ಈ ಪ್ರಾಣಿಗಳ ಮಧ್ಯೆ ಆ ಪ್ರಾಚೀನ ಮನುಷ್ಯ ಸಾಮಾನ್ಯವಾದ ಆಯುಧಗಳ ಸಹಾಯದಿಂದ ಎಲ್ಲ ಗಂಡಾಂತರಗಳನ್ನೂ ಎದುರಿಸಿ ನಿಂತನು. ಕೊನೆಕೊನೆಗೆ ಎಲ್ಲ ಪ್ರಾಣಿಗಳಿಗೂ ಅವನೇ ಸ್ವಾಮಿಯಾಗುವ ಅದೃಷ್ಟವಿತ್ತು. ಇದು ಫಲಿಸಿದ್ದು ಅವನ ಆಶ್ಚರ್ಯಕರವಾದ ಮಿದುಳು ಶಕ್ತಿಯಿಂದ. ಈಗ ಅವನು ಬುದ್ಧಿಯಲ್ಲಿ ಅತಿ ಭಯಂಕರ ಹಾಗೂ ಅತ್ಯಂತ ಚತುರ. ಇದನ್ನು ನೋಡಿದರೆ ಅವನು ಅಷ್ಟು ನಿಸ್ಸಹಾಯ ಪೂರ್ವಿಕರಿಂದ ಬಂದವನೆ ಎಂಬುದನ್ನು ನಂಬುವುದು ಕಷ್ಟವಾಗುತ್ತದೆ.

ಆದಿ ಮಾನವನು ಹೇಗೆ ಬಾಳಿದನು, ಹೇಗೆ ಯುಗಯುಗಗಳನ್ನು ಕಳೆದು ಈಗಿನ ಸ್ಥಿತಿಗೆ ಅವನು ಬಂದನು ಎಂಬುದು ಪ್ರಪಂಚದ ಇತಿಹಾಸದಲ್ಲಿ ಅತ್ಯಂತ ಅದ್ಭುತವಾದ ಕಥೆ.

ಮಾನವನ ಈಗೀಗಿನ ಸಾಹಸಕಾರ್ಯಗಳನ್ನು ನಾವು ಚರಿತ್ರೆಯೊಂದು ಕರೆಯುತ್ತೇವೆ. ಅದು ನಿಜವಾಗಿಯೂ ಅವನ ಕಥೆಯ ಕೊನೆಯ ಅಧ್ಯಾಯ.

ಮಾನವನ ಅದ್ಭುತಕಥೆಯ ಮೊದ ಮೊದಲಿನ ಅಧ್ಯಾಯಗಳನ್ನು ವರ್ಣಿಸುವುದು ಅತಿ ಕಷ್ಟವಾದುದು. ಏಕೆಂದರೆ ಬಹಳ ಪ್ರಾಚೀನ ಯುಗಗಳ ಹಿಂದಿನಿಂದಲೂ ಇರುವ ಬಂಡೆಗಳು, ಮನುಷ್ಯನು ನಿರ್ಮಿಸಿದ ಇತರ ವಸ್ತುಗಳು ನಾವು ಕಾಣಬಲ್ಲ ಮನುಷ್ಯನ ಮೂಳೆಗಳು ಅವನಿಗೆ ಸಂಬಂಧಪಟ್ಟ ಇತರ ವಸ್ತುಗಳು ಈ ಕಥೆಯನ್ನು ಹೇಳುವ ಮೂಕ ಕಥೆಗಾರರು ಅವುಗಳನ್ನು ನೋಡಿ ಆ ಕಥೆಯನ್ನು ತಿಳಿಯಬೇಕಾದ ಶಕ್ತಿ ನಮಗಿದ್ದರೆ ಮಾತ್ರ ಅದನ್ನು ತಿಳಿಯಬಹುದು.

ಮೊದಲಭಾಗಕ್ಕೆ ಸಂಬಂಧಪಟ್ಟ ನಮ್ಮ ಜ್ಞಾನಶಕ್ತಿಯೇ ಕಡಮೆ ಇರುವಾಗ ಕತೆಯಾವಾಗಲೂ ಸ್ಪಷ್ಟವಾಗಿರುವುದಿಲ್ಲವೆನ್ನುವುದು ಅಷ್ಟೇನೂ ಆಶ್ಚರ್ಯಕರವಾದುದಲ್ಲ. ಹೀಗೆ ಅದರಲ್ಲಿ ಅಲ್ಲಲ್ಲೇ ಬಿಡುವುಗಳಿವೆ, ಕೆಲವು ಭಾಗಗಳಿಗೆ ಭಿನ್ನ ಭಿನ್ನ ವಿವರಣೆಗಳನ್ನು ಶಾಸ್ತ್ರಜ್ಞರು ಕೊಡುತ್ತಾರೆ. ಇಷ್ಟರಮೇಲೆ ಹಲವು ಭಾಗವನ್ನಂತೂ ಅರ್ಥಮಾಡಿಕೊಳ್ಳುವುದಕ್ಕೇ ಆಗುವುದಿಲ್ಲ.

ಅಷ್ಟು ಪ್ರಾಚೀನವಾದುದರಲ್ಲಿ ನಮಗೆ ಏನಾದರೂ ತಿಳಿದಿದೆಯೆಂಬುದೇ ಆಶ್ಚರ್ಯಕರವಾದುದು. ವರ್ಷ ಕಳೆದಹಾಗೆಲ್ಲ ನಮ್ಮ ಜ್ಞಾನ ಹೆಚ್ಚು ಸ್ಪಷ್ಟವೂ, ಹೆಚ್ಚು ಪೂರ್ಣವೂ ಆಗುತ್ತಾ ಬರುತ್ತದೆ. ಮನುಷ್ಯನು ಕತೆಯನ್ನು ಬಯಲುಮಾಡುವ ಉದ್ದೇಶದಿಂದ ನೋಡಿದರೆ ಭೂಮಿಯ ಅತಿ ಸ್ವಲ್ಪ ಭಾಗವನ್ನು ಮಾತ್ರ ಹೊಕ್ಕು ನೋಡಿದ್ದಾಗಿದೆ. ಇನ್ನೂ ಇಂಡಿಯಾ ಆಫ್ರಿಕಾ ಮೊದಲಾದ ಹಲವುದೇಶಗಳಲ್ಲಿ ಯಾವಶೋಧನೆಯೂ

ನಡೆದಿಲ್ಲ. ಆದರೆ ಸಂಶೋಧನೆಗಳು ಮುಂದುವರಿದಂತೆಲ್ಲ ಈಗಿರುವುದಕ್ಕಿಂತ ಹೆಚ್ಚು ಪೂರ್ಣವಾದ ಆಧಾರ ನಮಗೆ ಸಿಕ್ಕುತ್ತದೆಯೆಂದು ನಾವು ನಿಸ್ಸಂದೇಹವಾಗಿ ಭರವಸೆ ಇಟ್ಟುಕೊಳ್ಳಬಹುದು.





ಮಾನವಕುಲದ ಪೂರ್ವಿಕರಿದ್ದ ಗುರುತುಗಳು

## ಜಾವಾ ಮಾನವ

ಸಂಶೋಧನೆಯಿಂದ ಈಗ ಗೊತ್ತಾಗಿರುವ ಮಾನವ ಇತಿಹಾಸದಂತೆ ಆದಿ ಮಾನವರ ಅವಶೇಷಗಳು ಪ್ರಪಂಚದ ನಾನಾಕಡೆ ಸಿಕ್ಕಿವೆ. ಜಾವದಲ್ಲಿ ಸಿಕ್ಕಿರುವ ಕುರುಹೇ ಅತಿ ಹಿಂದಿನ ಮನುಷ್ಯನದು. ಅಲ್ಲಿ ಒಂದು ಗವಿಯಲ್ಲಿ ತಲೆಬುರುಡೆಯ ಚೂರು, ಕೆಲವು ಹಲ್ಲುಗಳು, ಮೂಳೆಗಳು ದೊರಕಿವೆ. ಇವುಗಳ ಆಧಾರದ ಮೇಲೆ ಆ ಮನುಷ್ಯ ಪೂರ್ಣ ಮಾನವನಾಗಿಯೂ ಇರಲಿಲ್ಲ ವಾನರನಾಗಿಯೂ ಇರಲಿಲ್ಲವೆಂದು ಹೇಳಬಹುದು. ಆದರೆ ಅವನ ಮಿದುಳು ವಾನರನ ಮಿದುಳಿಗಿಂತಲೂ ವೃದ್ಧಿಹೊಂದಿತ್ತು. ಬಹುಶಃ ಈ ಪ್ರಾಣಿ ಸುಮಾರು ಐದುಲಕ್ಷ ವರ್ಷಗಳ ಹಿಂದೆ ಜೀವಿಸಿರಬೇಕು. ಅದೇ ಕಾಲವನ್ನು ಸೂಚಿಸುವ ಕೆಲವು ಕಲ್ಲಿನ ಆಯುಧಗಳು ಯೂರೋಪಿನಲ್ಲಿ ದೊರೆತಿವೆ. ಆ ಜಾವಾ ಮನುಷ್ಯನನ್ನೇ ಹೋಲುವಂತವರಿಂದಲೇ ಅವುಗಳು ಉಪಯೋಗಿಸಲಾಗುತ್ತಿತ್ತೇನೊ!



ಜಾವಾ ಮಾನವ

## ಹೀಡಲ್‌ಬರ್ಗ್ ಮಾನವ

ಇದಾದಮೇಲೆ ಸುಮಾರು ಎರಡುಲಕ್ಷ ವರ್ಷ ಕಳೆದಮೇಲೆ ಇದ್ದಿರಬಹುದಾದ ಮನುಷ್ಯನ ದವಡೆಯೆಲುಬೊಂದು ಜರ್ಮನಿದೇಶದ 'ಹೀಡಲ್‌ಬರ್ಗ್' ಬಳಿ ಭೂಮಿಯೊಳಗೆ ಸಿಕ್ಕಿದೆ. ಪರಿಶೋಧನೆಯಿಂದ ಆ ಹೀಡಲ್‌ಬರ್ಗ್ ಪ್ರಾಣಿ ಜಾವ ಪ್ರಾಣಿಗಿಂತ ಹೆಚ್ಚಾಗಿ ಮನುಷ್ಯನನ್ನು ಹೋಲುತ್ತಾನೆ. ಆದರೆ ಆ ಪ್ರಾಣಿಗೆ ಮಾತಾಡುವುದಕ್ಕೆ ಅನುಕೂಲವಾಗಿ ದವಡೆಗಳಿದ್ದವೋ ಇಲ್ಲವೋ ಎಂಬುದನ್ನು ಹೇಳಲಾಗುವುದಿಲ್ಲ. ಈ ಹೀಡಲ್‌ಬರ್ಗ್ ಮನುಷ್ಯ ಬದುಕಿದ ಮೇಲೆ ಸುಮಾರು ಒಂದು ಲಕ್ಷ ವರುಷಗಳ ಅನಂತರ ಬದುಕಿದ ಮನುಷ್ಯನ ತಲೆಬುರುಡೆಯ ಮೂಳೆಗಳು ಸಿಕ್ಕಿವೆ. ಇದು ಸಿಕ್ಕಿರುವುದು ದಕ್ಷಿಣಇಂಗ್ಲೆಂಡಿನ ಸಸೆಕ್ಸ್ ಪ್ರಾಂತದ 'ಪಿಟ್ಸ್‌ಡೌನ್' ಪ್ರದೇಶದಲ್ಲಿ. ಇದೂ ಸಂಪೂರ್ಣ ಮನುಷ್ಯನಾಗಿರಲಾರದು. ಆದರೆ ಹಿಂದಿನ ಅರೆ ಮಾನವರಿಗಿಂತ ಬುದ್ಧಿ ಶಕ್ತಿಯಲ್ಲಿ ಉತ್ತಮವಾಗಿದ್ದಿರಬೇಕು.

## ನೀಂಡಾರ್ತಲ್ ಮಾನವ



ನಾವೀಗ ಲಕ್ಷವರುಷಗಟ್ಟಲೆ ಮುಂದೆ ಮುಂದೆ ಹಾರುತ್ತಿದ್ದೇವೆ. ಆ ಓಟದಲ್ಲಿ ನಾವೀಗ ಇಂದಿಗೆ ಸುಮಾರು ಐವತ್ತು ಸಾವಿರ ವರುಷಗಳ ಹಿಂದಿನವರೆಗೆ ಬಂದಿದ್ದೇವೆ. ಅದು ನಾಲ್ಕನೆ ಶೀತಯುಗ ಕೊನೆಮುಟ್ಟುವ ಕಾಲ. ಆಗ ಮಾನವನನ್ನು ಇನ್ನೂ ಹೆಚ್ಚಾಗಿ ಹೋಲುವ ಪ್ರಾಣಿಇತ್ತು. ಆ ಪ್ರಾಣಿಗಳ ತಲೆಬುರುಡೆಗಳು, ಮೂಳೆಗಳು, ಅವುಗಳು

ಉಪಯೋಗಿಸುತ್ತಿದ್ದ ದೊಡ್ಡದೊಡ್ಡ ಕಲ್ಲಿನ ಆಯುಧಗಳು ಜರ್ಮನಿಯಲ್ಲಿರುವ 'ನೀಂಡಾರ್ತಲ್' ಕಣಿವೆಯಲ್ಲಿ ಸಿಕ್ಕಿವೆ. ಈ ಪ್ರಾಣಿಯನ್ನು ನೀಂಡಾರ್ತಲ್ ಮನುಷ್ಯನೆಂದು ಕರೆಯುತ್ತಾರೆ. ಇದಕ್ಕೆ ಬೆಂಕಿಮಾಡಲು ಬರುತ್ತಿತ್ತು. ಆಯುಧ ಮಾಡಲು ಕಲ್ಲನ್ನು ಕುಟ್ಟುವಾಗ ಹಾರಿದ ಕಿಡಿ ಅಕಸ್ಮಾತ್ತಾಗಿ ಹತ್ತಿರದ ಹತ್ತಿಯಂತಹ ಸಾಮಾನಿಗೆ ತಾಕಿ ಹತ್ತಿಕೊಂಡುದರಿಂದ ಬೆಂಕಿ ಮಾಡುವುದು ತಿಳಿದಿರಬೇಕು. ಈ ಪ್ರಾಣಿ ಗವಿಗಳಲ್ಲಿ ವಾಸಿಸುತ್ತಿತ್ತು. ಬಹುಶಃ ಅದು ಒಂದು ಚರ್ಮವನ್ನು ಹೊದೆಯುತ್ತಿದ್ದಿರಬಹುದು. ಅದು ಮನುಷ್ಯನಂತೆ ಬಲಗೈಯನ್ನು ಉಪಯೋಗಿಸುತ್ತಿತ್ತು.



ನೀಂಡಾರ್ತಲ್ ಮಾನವ

ಅದಕ್ಕೆ ತಲೆಯನ್ನು ಮೇಲೆತ್ತಿ ಆಕಾಶನೋಡಲಾಗುತ್ತಿರಲಿಲ್ಲ. ಹಿಂದಕ್ಕೆ ತಿರುಗಿಸುವುದಕ್ಕೂ ಆಗುತ್ತಿರಲಿಲ್ಲ. ನೇರವಾಗಿ ನಿಂತು ನಡೆಯಬಲ್ಲು

ದಾಗಿತ್ತೆಂದು ಹೇಳುವುದಕ್ಕೂ ಆಗುವುದಿಲ್ಲ. ಬಹುಶಃ ಅದರ ಮೈತುಂಬ ಕೂದಲಿದ್ದಿರಬೇಕು. ಅದರ ಕೈ ಬೆರಳುಗಳು ಮನುಷ್ಯನಿಗಿರುವಂತೆ ಸರಿಯಾಗಿ ಹೆಬ್ಬೆರಳಿಗಿದಿರಾಗುವಂತಿರಲಿಲ್ಲ. ಈ ನೀಂಡಾರ್ತ್ಥಲ್ ಮಾನವನಿಗೆ ಮಾತಾಡಲು ಬರುತ್ತಿರಲಾರದು. ಆದರೂ ಮಿದಳುಶಕ್ತಿ ಬಹಳದೂರ ಬೆಳೆದಿತ್ತು. ಆದುದರಿಂದ ಅದನ್ನು ವಾನರ ಅನ್ನುವುದಕ್ಕಿಂತಲೂ ಮಾನವನೆಂದೇ ಕರೆಯಬಹುದು.

ಈ ಬಗೆಯ ಮನುಷ್ಯರು ಯೂರೋಪಿನ ಅನೇಕ ಕಡೆಗಳಲ್ಲಿಯೂ ಆಫ್ರಿಕದ ಹಲವೆಡೆಗಳಲ್ಲಿಯೂ ಇದ್ದರೆಂಬುದಕ್ಕೆ ಆಧಾರಗಳಿವೆ. ಸಾವಿರಾರು ವರುಷಗಳವರೆಗೆ ಪ್ರಾಣಿಗಳಲ್ಲಿ ಅತ್ಯುತ್ತಮವಾಗಿದ್ದ ಈ ನೀಂಡಾರ್ತ್ಥಲ್ ಮಾನವ ಬಾಳಿರಬೇಕು. ಈ ಕುಲ ರೋಗ ರುಜಿನ ಅಥವಾ ವಾತಾವರಣದ ಅವಾಂತರದಿಂದ ಹಾಳಾಗಿರಬೇಕು. ಆಮೇಲೆ ಸುಮಾರು ಕಾಲುಲಕ್ಷ ವರುಷಗಳ ಅನಂತರ ಹವಾಗುಣ ಬಿಸಿಯಾದಮೇಲೆ ಇವರಿಗಿಂತಲೂ ಬುದ್ಧಿವಂತರಾದ ಮನುಷ್ಯರು ಬಂದರು. ಅವರ ಮಿದುಳಿದ್ದ ತಲೆ ಬುರುಡೆಯ ಭಾಗ, ಕೊರಳು ಮತ್ತು ಹಲ್ಲುಗಳು ನಮ್ಮಂತೆಯೇ ಇದ್ದವು. ಇವನಿಗೆ ನಮಗಿರುವಂತೆಯೇ ಕೈಗಳಿದ್ದವು. ಹೆಬ್ಬೆರಳಿನ ಸಹಾಯದಿಂದ ಇವರು ಒಳ್ಳೆಯ ಆಯುಧಗಳನ್ನು ಉಜ್ಜಿಕೊಳ್ಳಲು ಅನುಕೂಲವಿತ್ತು. ಇವರ ಅನುಭವ ನೀಂಡಾರ್ತ್ಥಲ್ ಮಾನವನಿಗಿಂತ ಹೆಚ್ಚು. ಜತೆಗೆ ಅವರಿಗಾಗಲೆ ಮಾತಾಡುವುದು ಬರುತ್ತಿತ್ತು. ಒಬ್ಬರಿಗೊಬ್ಬ ಸಹಕರಿಸಿ ನೆರವಾಗುತ್ತಿದ್ದರು. ಅವರು ಉಳಿದಿದ್ದ ನೀಂಡಾರ್ತ್ಥಲ್ ಜನರನ್ನು ಓಡಿಸಿ ಅವರಿದ್ದ ಗುಹೆಗಳನ್ನೆಲ್ಲಾ ಆಕ್ರಮಿಸಿದರು. ಕೊನೆಗೆ ಅವರಮೇಲೆ ಯುದ್ಧ ಹೂಡಿ ಅವರನ್ನೆಲ್ಲ ನಿರ್ನಾಮಮಾಡಿದ್ದಾರು. ಇವರು ಯಾವ ಕಡೆಯಿಂದ ಬಂದರು ಎಂದು ನಿಖರವಾಗಿ ಹೇಳಲಾಗುವುದಿಲ್ಲ. ಬಹುಶಃ ಆಫ್ರಿಕದಿಂದ ಬಂದಿರಬೇಕು. ಇವರ ಬುದ್ಧಿ ಆಗಲೆ ಪಾರಮಾರ್ಥಿಕದಕಡೆ ತಿರುಗಿತ್ತೆಂದು ಕಾಣುತ್ತದೆ. ಇವರು ಹೆಣಗಳನ್ನು ಹೂಳುತ್ತಿದ್ದರು. ಜತೆಗೆ ಅವುಗಳ ಕೈಗೆ ಸಿಗುವಂತೆ ಆಯುಧಗಳನ್ನೂ ಆಹಾರವನ್ನೂ ಇಡುತ್ತಿದ್ದರು. ಇವನೇ ಮಾನವ ವಂಶದ ಉಷಾ ಮೂರ್ತಿ.

## ಉಷಾ ಮಾನವ



ಉಷಾ ಮಾನವ

ಅಂತೂ ನಾವೀಗ ನಿಜವಾದ ಮಾನವನ ಉದಯಕಾಲಕ್ಕೆ ಬಂದಂತಾಯಿತು. ಹೀಗೆ ಜೀವಿಯ ಉದಯಕಾಲದಿಂದ ಯುಗ ಯುಗಾಂತರ ಕಳೆದು ಬಂದಿದ್ದೇವೆ. ಈ ಅಸಂಖ್ಯಾತವಾದ ಕಾಲ ನಿಧಾನವಾಗಿಯೂ ಬೇನೆಪೂರಿತವಾಗಿಯೂ ಕಳೆದಿದೆ. ಆ ನಡುವೆ ಅಭಿವೃದ್ಧಿ ಮಾರ್ಗವನ್ನೇ ಹಿಡಿದುಬಂದ ಜೀವಿ ಕೊನೆಗೆ ಈ ಗ್ರಹದ ನಾಯಕನಾಗಿರುವ ಮಾನವತ್ವಕ್ಕೆ ಏರಿದೆ. ಜೀವಾಧಾರವಾದ ಆಹಾರ ಕ್ಕಾಗಿಯೂ ಈ ಪ್ರಪಂಚದಲ್ಲಿ ಬದುಕಬೇಕೆಂಬ ಸಂಕಲ್ಪದಿಂದಲೂ

ಜೀವಿಯು ಜೀವನದ ಘೋರ ಸಂಗ್ರಾಮದಲ್ಲಿ ಸಂತತ ಹೋರಾಟ ನಡೆಸಿದೆ. ಈ ಹೋರಾಟದಲ್ಲಿ ಅಸಂಖ್ಯಾತವಾದ ವ್ಯಕ್ತಿಗಳಷ್ಟೇ ಅಲ್ಲ, ಎಷ್ಟೋ ಇಡಿ ಕುಲಗಳೇ ನಾಶವಾಗಿ ಹೋಗಿವೆ. ಅಖಂಡವಾದ ತ್ಯಾಗ ದಿಂದಲೂ, ವರ್ಣಿಸಲಸದಳವಾದ ಸಂಕಟ ಬೇನೆಗಳಿಂದಲೂ ಪ್ರಾಣಿ ಪ್ರಾಣಿಗೆ ಆಹಾರವಾಗಿ ಕುಲ ಕುಲಕ್ಕೆ ತುತ್ತಾಗಿ ಜೀವದ ಉನ್ನತಿಗೆ ಮೆಟ್ಟಲುಗಳಾಗಿವೆ.

ಉಷಾ ಮಾನವನ ಕಾಲದಿಂದ ಮುಂದುವರಿಯೋಣ. ಇತರ ಭಯಂಕರ ಪ್ರಾಣಿಗಳೊಡನೆ ಹೋಲಿಸಿದರೆ ದೇಹಶಕ್ತಿಯಲ್ಲಿ ನಿರ್ಬಲ ವಾದ ಈ ಸಣ್ಣ ಪ್ರಾಣಿ ಆ ಗೊಂಡಾರಣ್ಯದಲ್ಲಿ ಸುತ್ತಮುತ್ತಲೂ ಇವನನ್ನು ಕಾಡಲು, ಸಮಯ ಸಿಕ್ಕಿದರೆ ಕಬಳಿಸಿಯೇಬಿಡಲು ಕಾಯ್ದಿದ್ದ ಶತ್ರುಪ್ರಾಣಿಗಳ ಮಧ್ಯೆ ಬಾಳಬೇಕಾಗಿತ್ತು. ಅದೇನು ಅಷ್ಟು ಸುಲಭದ ಕೆಲಸವೇ? ಆ ಗಂಡಾಂತರಗಳಿಂದ ತಪ್ಪಿಸಿಕೊಳ್ಳಲು ಇವನು ಉಪಾಯ ಹುಡುಕಬೇಕಾಯಿತು. ಅಷ್ಟೇ ಅಲ್ಲ, ಜತೆಗೆ ಆಹಾರದ ಸಮಸ್ಯೆ ಯಂತೂ ಎರಡೂ ಹೊತ್ತು ಮುಂದೇಳುತಿತ್ತು. ಅದನ್ನು ಸಂಪಾದಿಸುವ ಸುಲಭದಾರಿ ಕಂಡುಹಿಡಿಯಬೇಕಾಗಿತ್ತು. ತನ್ನ ಕೂಸುಗಳಿಗೂ ಅವಲಂಬಿ ಗಳಿಗೂ ರಕ್ಷಣೆ ಕೊಡಬೇಕಾಗಿತ್ತು. ಬದುಕು ಸಾವಿನ ಹೋರಾಟದಲ್ಲಿ ಬಾಳು ನೀಸಬೇಕಾಗಿದ್ದರೆ ಬುದ್ಧಿಶಕ್ತಿಯನ್ನು ಉಪಯೋಗಿಸಬೇಕಾಯಿತು. ಬುದ್ಧಿ ಬೆಳೆಯಿತು.

ಹೀಗೆ ಬುದ್ಧಿಶಕ್ತಿ ಹೆಚ್ಚಾದಂತೆ ಮುಂದೆ ಹೆಚ್ಚು ಬುದ್ಧಿವಂತರಾಗಿ ಹೆಚ್ಚು ಅನುಭವ ಗಳಿಸಿದವರಾಗಿ, ಮಾತಾಡಿಕೊಂಡು ಒಬ್ಬರಿಗೊಬ್ಬರು ಸಹಕರಿಸಿ ಬಾಳಬಲ್ಲ ಜನರು ಹುಟ್ಟಿದರು.

ಇನ್ನೂ ಈ ಜನರು ಬೇಟೆಯಿಂದ ಜೀವಿಸುತ್ತಿದ್ದರೂ, ಸಣ್ಣ ಸಣ್ಣ ಪ್ರಾಣಿಗಳನ್ನೂ, ಮೀನುಗಳನ್ನೂ ಹಿಡಿದು ಆಹಾರಕ್ಕೆ ಉಪಯೋಗಿಸು



ತ್ತಿದ್ದರು. ಬೇಟೆಗೆ ಹೋದಾಗ ಸಿಕ್ಕಿದ ಕೆಲವು ಪ್ರಾಣಿಗಳ ಸಣ್ಣ ಮರಿಗಳನ್ನು ತಂದು ತಮ್ಮ ಗುಹೆಗಳಲ್ಲಿ ಸಾಕಿ ಪಳಗಿಸಿ ಒಗ್ಗಿಸಿಕೊಂಡಿದ್ದರು. ಹೀಗೆ ನಾಯಿ, ಜಿಂಕೆ ಇವುಗಳು ಮನೆ ಬಳಕೆ ಪ್ರಾಣಿಗಳಾಗಿದ್ದವು. ಪ್ರಾಣಿಗಳ ಚರ್ಮ ಇವರ ಉಡುಪಾಗಿತ್ತು.

**ಕಲೆ**

ಇವರಲ್ಲಾಗಲೆ ಕಲಾದೃಷ್ಟಿಯ ಮೊಳಕೆ ಒಡೆದಿತ್ತು. ತಮ್ಮ ಕೊರಳನ್ನು ಅಲಂಕಾರ ಮಾಡಿಕೊಳ್ಳಲು ಚಿಪ್ಪಿಗೆ ತೂತುಮಾಡಿ ನಾರಿನಿಂದ ಪೋಣಿಸಿಕೊಳ್ಳುತ್ತಿದ್ದರು. ತಾವಿದ್ದ ಗುಹೆಯ ಬಂಡೆಗಳ ಗೋಡೆಗಳ ಮೇಲೆ ಚಿತ್ರ ಕೆತ್ತಲು ಪ್ರಾರಂಭಿಸಿದರು. ತಮಗೆ ಪರಿಚಯವಿರುವ ಪ್ರಾಣಿಗಳ ಚಿತ್ರಗಳನ್ನು ಬಂಡೆಗಳ ಮೇಲೆ ಕೆತ್ತಬೇಕಾಗಿದ್ದರೆ ನಿಜವಾಗಿಯೂ ಅವರ ಬುದ್ಧಿಶಕ್ತಿಯ ಮಟ್ಟ ಏರಿತ್ತು. ಆದರಿನ್ನೂ ಅವರು ಪ್ರಾಚೀನ ಶಿಲಾಯುಗದಲ್ಲಿದ್ದರು. ಅವರ ಆಯುಧಗಳಿನ್ನೂ ಕಲ್ಲಿನವು; ಒರಟಾಗಿದ್ದುವು.

ಈ ಪ್ರಾಚೀನ ಶಿಲಾಯುಗವು ಕಳೆಯಿತು. ಆದುವರೆಗೂ ಇದ್ದ ಹಿಮಯುಗವೂ ಕಳೆಯಿತು. ವಾತಾವರಣ ಶಾಖಗೂಡಿ ಹಿತವಾಯಿತು. ಏಷಿಯಾದಲ್ಲಿಯೂ ಯೂರೋಪಿನಲ್ಲಿಯೂ ದೊಡ್ಡ ದೊಡ್ಡ ಕಾಡುಗಳು



ಪ್ರಾಚೀನ ಶಿಲಾಯುಗದ ಜನರು ತಮ್ಮ ಕೊರಳನ್ನು ಅಲಂಕಾರ ಮಾಡಿಕೊಳ್ಳಲು ಚಿಪ್ಪು ಮೂಳೆಗಳನ್ನು ಕೊರೆದು ಮಾಡಿಕೊಳ್ಳುತ್ತಿದ್ದ ಆಭರಣ

ಬೆಳೆದುಕೊಂಡವು. ಅಷ್ಟರಲ್ಲಿ ಆಗ ಅಂದರೆ ಈಗ್ಗೆ ಸುಮಾರು ೨೦ ಸಾವಿರ ವರುಷಗಳ ಹಿಂದೆ ನವಶಿಲಾಯುಗದ ಜನರು ಬಂದರು. ಇವರು ತಮ್ಮ ಪೂರ್ವಿಕರಾದ ಪ್ರಾಚೀನ ಶಿಲಾಯುಗದವರಿಗಿಂತ ನಾಗರಿಕರು. ಅವರೂ ಕಲ್ಲು ಆಯುಧಗಳನ್ನೇ ಉಪಯೋಗಿಸುತ್ತಿದ್ದರು. ಆದರೆ ಆ ಆಯುಧಗಳು ನಾಜೂಕಾಗಿದ್ದುವು.



ಮಾನವನಿಗೆ ಕಲಾದೃಷ್ಟಿ ಬಂದಾಗ ತಾನು ವಾಸಮಾಡುತ್ತಿದ್ದ ಗುಹೆಯ ಬಂಡೆಯಮೇಲೆ ಚಿತ್ರ ಕೆತ್ತಿದನು

ಈ ಕಾಲದಲ್ಲೇ ಒಂದು ಸ್ವಾರಸ್ಯವಾದ ವಿಷಯ ನಡೆಯಿತು. ತಾವು ತಿಂದು ಗವಿಯ ಹೊರಗೆ ಬಿಸಾಡಿದ್ದ ಬೀಜಗಳು ಮಳೆಯಿಂದ ನೆನೆದು ಮಣ್ಣಿನಿಂದ ಅರಳಿ ಸೂರ್ಯನ ಶಾಖಗೊಂಡು ಮೊಳೆತುದನ್ನು

ಆ ಜನರು ಅರಿತರು. ಅದು ಅವರಿಗೆ ಆಶ್ಚರ್ಯವನ್ನುಂಟುಮಾಡಿತು. ವ್ಯವಸಾಯದ ಗುಟ್ಟು ಗೊತ್ತಾಯಿತು.

ಭೂಮಿಯನ್ನು ಹದಮಾಡಿ ಬೀಜ ಚೆಲ್ಲಿ ಬೆಳೆ ಬೆಳೆಯುವುದರಿಂದ ಅವರು ದಿನವೆಲ್ಲ ಕಾಡಿನಲ್ಲಿ ಪ್ರಾಣಿಗಳ ಬೆನ್ನುಹತ್ತಿ ಬಳಲುವುದು ತಪ್ಪಿತು. ಆಹಾರ ಸುಲಭವಾಗಿ ಸಿಗುವಂತಾಯಿತು. ಇದರಿಂದ ವಿರಾಮ ಸಿಕ್ಕಿತು.



ಆಲೋಚನೆ ಮಾಡಲು ಅವಕಾಶ ದೊರಕಿತು. ಅವಕಾಶ ಸಿಕ್ಕಿದುದರಿಂದ ಅವರು ಹೊಸ ಹೊಸ ಶೋಧನೆ ನಡೆಸಲು, ಹೊಸ ಹೊಸ ವಿಷಯಗಳನ್ನು ಕಂಡುಹಿಡಿಯಲು ಅನುಕೂಲವಾಯಿತು.

ಜೇಡಿಮಣ್ಣಿನಿಂದ ಮಡಕೆ ಕುಡಿಕೆಗಳನ್ನು ಮಾಡಿಕೊಳ್ಳುವುದನ್ನು ಕಂಡುಹಿಡಿದರು. ತಮ್ಮ ಆಹಾರವನ್ನು ಬೇಯಿಸಿ ತಿನ್ನಲು ಪ್ರಾರಂಭಿಸಿದರು. ಅವರ ಕಲ್ಲಿನ ಆಯುಧಗಳು ಇನ್ನೂ ನಯವಾದವು. ಹಸು, ನಾಯಿ, ಕುರಿ, ಮೇಕೆ ಮೊದಲಾದ ಪ್ರಾಣಿಗಳನ್ನು ಪಳಗಿಸಿಕೊಂಡರು.

ಅಷ್ಟೇ ಅಲ್ಲ, ಕ್ರಮೇಣ ಅವರು ನಾರಿನಿಂದ ತಮ್ಮ ಬಟ್ಟೆಗಳನ್ನು ನೇಯ್ದು ಕೊಳ್ಳುವುದನ್ನು ಕಲಿತರು.



ಪ್ರಾಣಿಗಳನ್ನು ಪಳಗಿಸಿ ತಮ್ಮೊಡನೆ ಇಟ್ಟುಕೊಳ್ಳಬೇಕಾಯಿತು. ಮತ್ತು ಆಹಾರವಿಡಲು ಮಡಕೆ ಕುಡಿಕೆಗಳನ್ನು ಹೊಂದಿಸಿಕೊಳ್ಳಬೇಕಾಯಿತು. ಗೊತ್ತಾದ ಸ್ಥಳಗಳನ್ನು ಕೆದಕಿ ಬೀಜ ಚೆಲ್ಲಿ, ಬೆಳಸು ಬಂದಮೇಲೆ ಅದನ್ನು ಕಾಯಬೇಕಾಗಿತ್ತು. ಇದೆಲ್ಲದರ ಅನುಕೂಲಕ್ಕಾಗಿ ತಾತ್ಕಾಲಿಕವಾದುದಾದರೂ ಒಂದೊಂದು ಗುಂಪಿಗೂ ಅಥವಾ ಸಂಸಾರಕ್ಕೂ ಗುಡಿಸಲುಗಳನ್ನು ಕಟ್ಟಿಕೊಂಡು ಅಲ್ಲಿ ಸಂಸಾರ ಹೂಡಬೇಕಾಯಿತು.

ಜನ ತಮ್ಮ ವ್ಯವಸಾಯಕ್ಕೆ ಅನುಕೂಲವಾಗಿ ಹವಾಗುಣ ಹಿತಕರವಾಗಿದ್ದ ನದಿ ಬೈಲುಗಳಲ್ಲೂ ಫಲವತ್ತಾದ ಪ್ರದೇಶಗಳಲ್ಲೂ ಊರು ಕಟ್ಟಿದರು. ಕ್ರೂರ ಪ್ರಾಣಿಗಳ ಕಾಟ ತಪ್ಪಿಸಿಕೊಳ್ಳಲು ಇವರು ಸಾಧಾರಣವಾಗಿ ನೀರುಮಧ್ಯೆ ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತಿದ್ದರು. ಹೀಗೆ ನೀರುಮಧ್ಯದಲ್ಲಿ ಮನೆಕಟ್ಟಿ ವಾಸಮಾಡುತ್ತಿದ್ದ ಜನರು ಭೂಮಧ್ಯ ಸಮುದ್ರವಿರುವ ಪ್ರದೇಶದಲ್ಲಿ ಹೆಚ್ಚು ನೆಲಸಿದರು. ಅಲ್ಲಿ ಆಗ ಈಗಿರುವಂತೆ ಸಮುದ್ರವಿರಲಿಲ್ಲವೆಂದು ಕಾಣುತ್ತದೆ. ಜಿಬ್ರಾಲ್ಟರ್ ಜಲಸಂಧಿ ಅಕಸ್ಮಾತ್ ಉಂಟಾಗಿ ಅಟ್ಲಾಂಟಿಕ್ ಸಾಗರದ ನೀರುಬ್ಬಿ ಭೂಮಧ್ಯ ಪ್ರದೇಶ



ನೀರಿನ ಮಧ್ಯೆ ಮನೆ ಕಟ್ಟಿಕೊಂಡಿರುವುದು

ಸಮುದ್ರವಾಯಿತು. ಅಲ್ಲಿದ್ದ ಮನೆ ಮಠಗಳೆಲ್ಲ ಮುಳುಗಿದವು. ಜನರೂ ನೀರುಪಾಲಾದರು. ಬಹುಶಃ ಜಲಪ್ರಳಯವೆಂದು ಎಲ್ಲ ಪುರಾಣಗಳಲ್ಲಿರುವುದೂ ಈ ಜಲಪ್ರಳಯವೇ ಇದ್ದಿರಬೇಕು. ಅದು ನೋಡದ ಜನರ ಬಾಯಿಂದ ಅವರ ಪೀಳಿಗೆ, ಅವರಿಂದ ಅವರ ಮುಂದಿನವರಿಗೆ ತಿಳಿದು ಬಂದು ಈಗ ಪುರಾಣದ ಕತೆಯಾಗಿರಬೇಕು.



ಹಿಂದಿನ ಚಿತ್ರದಲ್ಲಿ ನೋಡಿದ ಕಲ್ಲಿನ ಆಯುಧಗಳಿಗೂ ಈ ಕಲ್ಲಿನ ಆಯುಧಗಳಿಗೂ ಎಷ್ಟು ವ್ಯತ್ಯಾಸ! ಶಿಲಾಯುಗದ ಅನಾಗರಿಕ ಜನರು ತಮ್ಮ ಬುದ್ಧಿ ಬೆಳೆದಂತೆ ನಯವಾದ ಆಯುಧಗಳನ್ನು ಮಾಡಿಕೊಳ್ಳ ತೊಡಗಿದರು



ನಲವತ್ತುಸಾವಿರ ವರ್ಷಗಳ ಹಿಂದಿನ ಜನರು ತಾವು ವಾಸಮಾಡುತ್ತಿದ್ದ ಗುಹೆಗಳ ಬಂಡೆಗಳ ಮೇಲೆ ಕೆತ್ತಿರುವ ಚಿತ್ರಗಳು. ಇದರಿಂದ ಕಲಾದೃಷ್ಟಿ ಮಾನವನಲ್ಲಿ ಎಂದಿನಿಂದ ಮೊಳಕೆಯೊಡಿಯಿತು ಎಂಬುದು ಗೊತ್ತಾಗುತ್ತದೆ

ಪೂರ್ವಿಕರಿದ್ದ ಗುರುತುಗಳು



ಆ ಅನಾಗರಿಕ ಕಾಡುಜನರಿಗೆ ಬಣ್ಣದಿಂದ ಚಿತ್ರಿಸುವುದೂ ಗೊತ್ತಿತ್ತು. ತಮ್ಮ ಗವಿಗಳ ಬಂಡೆ ಗೋಡೆಗಳನ್ನು ಉಜ್ಜಿ ನಯವಮಾಡಿ ಅದರಮೇಲೆ ಚಿತ್ರಿಸುತ್ತಿದ್ದರು.
ಈಗಲೂ ಅವು ಉಳಿದಿವೆ.



ಹೀಗೆ ಮಾನವನು ಪ್ರಗತಿಮಾರ್ಗದಲ್ಲಿ ಮುಂದು ಹೆಜ್ಜೆ ಇಡುತ್ತ ಲೋಹ ಯುಗದಲ್ಲಿ ಕಾಲಿಟ್ಟನು. ಕಬ್ಬಿಣದ ಮಹತ್ತು ಗೊತ್ತಿಲ್ಲದಿತ್ತು. ಚಿನ್ನ, ಬೆಳ್ಳಿ, ತಾಮ್ರದ ಉಪಯೋಗ ಕಂಡುಕೊಂಡನು. ಅವುಗಳನ್ನು ತನ್ನ ಅನುಕೂಲಕ್ಕಾಗಿ ಬಳಸ ತೊಡಗಿದನು. ಈ ಮುಂದೆ ಅವನ ಕಾಮಗಾರಿ ಮುಟ್ಟುಗಳು ಲೋಹದವುಗಳಾದವು. ಲೋಹ ಯುಗದಲ್ಲಿ ಮಾನವನ ನಾಗರಿಕತೆ ಬಹುದೂರ ಉತ್ತಮಗೊಂಡಿತು.

ಇನ್ನೂ ಮಾನವನ ಪೂರ್ವಿಕರಿಗೆ ಮಾತು ಬರದಿದ್ದಾಗಲೆ ಬುದ್ಧಿ ಕೆಲಸ ಮಾಡುತ್ತಿತ್ತು. ತಾನು ನೋಡಿದುದನ್ನು ತನ್ನ ಜೊತೆಗಾರನಿಗೆ ಹೇಳುವುದಕ್ಕೆ ಪ್ರಯತ್ನಿಸಿ ಒಂದೊಂದು ಪದಾರ್ಥಕ್ಕೆ ಒಂದೊಂದು ಶಬ್ದ ಮಾಡುವುದು ಮಾನವನ ಪೂರ್ವಿಕರಲ್ಲಿ ಮಾತು ಮೊದಲಾಗಲು ಪ್ರಾರಂಭವಾಗಿರಬೇಕು. ಆಭ್ಯಾಸ ಬೆಳೆದು ಹಾಗೆಯೇ ಕ್ರಮೇಣ ನಾಲಿಗೆ ತಿರುಗಿಸುವಂತಾಯಿತು. ನಾಲಿಗೆಯ ಒರಟು ಅಳಿದು ಮೃದುವಾಯಿತು. ಹಾಗೆಯೇ ಭಾಷೆ ಬೆಳೆಯಿತು.

## ಧರ್ಮ

ಮಾನವನ ಬುದ್ಧಿ ಬೆಳೆದಂತೆ ಪ್ರಕೃತಿಯ ಆಶ್ಚರ್ಯವನ್ನು ನೋಡಿ ತುಂಬಾ ಹೆದರುತ್ತಿದ್ದನು. ಸಿಡಿಲು, ಗುಡುಗು, ಮಳೆ, ಬೆಂಕಿ ಇವುಗಳೆಲ್ಲ

ಯಾವುದೋ ಕ್ರೌರ್ಯಶಕ್ತಿಗಳಿಂದು ಅವನ ನಂಬಿಕೆ. ಮನುಷ್ಯನಿಗೆ ಮಾತು ಬಂದಂತೆ ಆ ವಿಷಯದಲ್ಲಿ ಒಬ್ಬರೊಡನೊಬ್ಬರು ಚರ್ಚೆ ನಡೆಸ ತೊಡಗಿದರು. ಒಬ್ಬರ ಅಭಿಪ್ರಾಯ ಇನ್ನೊಬ್ಬರಿಗೆ ತಿಳಿಯುವಂತಾಯಿತು. ಇದರಿಂದ ಬುದ್ಧಿವಂತನಾದವನ ಮಾತನ್ನೇ ಎಲ್ಲರೂ ಕೇಳುವಂತಾಯಿತು. ಅದರಲ್ಲಿ ಬುದ್ಧಿವಂತನಾದವನು ತಮಗೆ ಕಾಣುವ ಆಶ್ಚರ್ಯಗಳಲ್ಲೆಲ್ಲ ಯಾವುದೋ ಕೈವಾಡವಿರಬೇಕೆಂದು ಊಹಿಸಿದನು. ಆ ಕೈವಾಡ ನಡೆಸುವವನು ಮಾಯವಾಗಿದ್ದು ಇಷ್ಟೆಲ್ಲ ಆಟವಾಡುವನೆಂದು ಭಾವಿಸಿದನು. ಆ ಶಕ್ತಿಗೆ ಒಂದು ಹೆಸರಿಟ್ಟು ಪೂಜಿಸ ತೊಡಗಿದನು. ಬೆಂಕಿ, ಮಳೆ, ಕಾಡು, ಭೂಕಂಪ, ಪ್ರವಾಹ ತಂದು ತಮ್ಮ ಗುಡಿಸಲು ಬೆಳೆಯನ್ನೆಲ್ಲ ಹಾಳುಮಾಡುತ್ತಿದ್ದ ನದಿ ಇವೆಲ್ಲ ಅವನಿಗೆ, ಪೂಜ್ಯವಸ್ತುಗಳಾದವು. ಹೀಗೆ ಒಂದು ಭಾವನೆ ಕೊಟ್ಟ ಜಾಣ ಪೂಜಾರಿಯಾದನು. ಇಷ್ಟೇ ಅಲ್ಲ, ಕೆಲವು ವೇಳೆ ದುಷ್ಟ ಮೃಗಗಳನ್ನೂ ಇವರು ಪೂಜಿಸ ತೊಡಗಿದರು. ಹಾವು, ಹುಲಿ, ಸಿಂಹ ಇವುಗಳ ಹಾವಳಿ ದೇವರ ಕೋಪದಿಂದ ಎಂದು ತಿಳಿದರು. ಸರಿ, ಅವಕ್ಕೂ ಪೂಜೆ, ಬಲಿ ಪ್ರಾರಂಭವಾಯಿತು. ನದಿಗೆ ಮಕ್ಕಳನ್ನು ಬಿಸಾಡಿ ಬಲಿಗೊಟ್ಟರೆ ನೆರೆ ಬಂದು ತೊಂದರೆಯಾಗುವುದು ತಪ್ಪುವುದೆಂದು ನೈಲ್ ಮೊದಲಾದ ನದಿಗಳಿಗೆ ಮಕ್ಕಳನ್ನು ಬಿಸಾಡಿ ಬಲಿಗೊಡುತ್ತಿದ್ದ ಕತೆಗಳಿವೆ. ಅಷ್ಟೇ ಅಲ್ಲ, ದೇವತೆಗಳಿಗೆ ಸಮಾಧಾನ ಮಾಡಲೆಂದು ಕಾಡಿನ ವಧ್ಯಸ್ಥಾನದಲ್ಲಿ ಹೆಣ್ಣುಮಕ್ಕಳನ್ನು ಕಟ್ಟಿ ಬರುತ್ತಿದ್ದರು. ಯಾವುದೋ ಪ್ರಾಣಿ ತಿಂದು ಹೋದರೆ ದೇವರೇ ತಿಂದು ತೃಪ್ತಿ ಹೊಂದಿತೆಂದು ಅಂದುಕೊಳ್ಳುತಿದ್ದರು. ಸತ್ತ ತಮ್ಮ ಪಿತೃಗಳು ಕಣ್ಣಿಗೆ ಕಾಣದ ರೀತಿಯಲ್ಲಿ ಬದುಕಿರುವರೆಂದು ಅವರ ತೃಪ್ತಿಗಾಗಿ ಎಡೆ ಪೂಜೆ ಪ್ರಾರಂಭವಾಯಿತು. ಈ ಭಾವನೆ ಬಹುಶಃ ಕನಸಿನಲ್ಲಿ ಆ ರೂಪನ್ನು ಕಂಡುದರಿಂದ ಹುಟ್ಟಿರಬೇಕು. ಹೀಗೆ ಧರ್ಮ ಹೆದರಿಕೆಯ ಬೀಜದಿಂದ ಬೆಳೆಯಿತು. ದೇವರುಗಳು ತೃಪ್ತಿಗೊಂಡು ತಮ್ಮನ್ನು ರಕ್ಷಿಸುವರೆಂದು ನಂಬಿಕೊಂಡು ತಾವು ತಿಳಿದುಕೊಂಡಿದ್ದ ದೇವರನ್ನು ಬಲಿ, ಪೂಜೆಗಳಿಂದ ಪೂಜಿಸ ತೊಡಗಿದರು.

ಇದೇ ಸದಾ ಇರಲಿಲ್ಲ. ಅವರಲ್ಲಿ ಇನ್ನೂ ಜಾಣರು ಹುಟ್ಟಿದರು. ಆ ಜಾಣ ಹೆದರಿಕೆ ಹುಟ್ಟಿದ ಮನಸ್ಸಿನಲ್ಲಿ ಹುಟ್ಟಿಕೊಂಡಿದ್ದ ದೇವರುಗಳ ಜೊತೆಗೆ ಇನ್ನಷ್ಟು ದೇವರನ್ನು ಸೇರಿಸಿದರು. ಅವರು ಉಪಕಾರ ದೇವತೆಗಳು ತಮಗೆ ಹಣ್ಣು ಕೊಡುವ ಮರಗಿಡಗಳು ಪೂಜ್ಯವಸ್ತುಗಳಾದವು. ಹಾಗೆಯೇ ಅನೇಕ ಉಪಕಾರ ಪ್ರಾಣಿಗಳಲ್ಲಿ ದೇವರಿರುವನೆಂದು ಅವಕ್ಕೆ ಪೂಜೆ ಸಲ್ಲಿಸಲು ಪ್ರಾರಂಭವಾಯಿತು. ಈ ಪೂಜ್ಯವಸ್ತುಗಳಿಗೆ ಗುಡಿ ಗೋಪುರಗಳನ್ನು ಕಟ್ಟಿದರು. ಅವು ಅವರಿಗೆ ಯಾತ್ರಾಸ್ಥಳಗಳಾದುವು. ಹೀಗೆ ತನ್ನ ಶಕ್ತಿಯಿದ್ದಂತೆ ತಾನು ನಂಬಿದ ದೇವರ ಯಾವ ಸ್ವರೂಪವನ್ನಾದರೂ ಕಲ್ಪಿಸಿಕೊಂಡು ಪೂಜಿಸ ತೊಡಗಿದ ಮಾನವನು. ಆ ದೇವರ ಭಾವನೆಗಳು ಬಂದಂತೆ ಆ ಭಾವನೆಯ ಕೊಂಬೆ ಕವಲುಗಳಾಗಿ ಧರ್ಮ ಬೆಳೆಯಿತು.

ಯಾವಾಗ ಒಂದು ದೇವರುಯೆಂದಾಯಿತೋ ಆಗಲೇ ಪೂಜಾರಿಯ ಸ್ಥಾನವೂ ಹುಟ್ಟಿತು. ಪೂಜಾರಿ ದೇವರ ಪ್ರತಿನಿಧಿ. ಅವನು ದೇವರನ್ನು ಮೆಚ್ಚಿಸಿದರೆ ಜನರಿಗೆ ಮೇಲು, ಇಲ್ಲದಿದ್ದರೆ ಜನರಿಗೆ ಕಷ್ಟ. ಅದರಿಂದ ಪೂಜಾರಿಯನ್ನು ಜನ ಮೆಚ್ಚಿಸಬೇಕು. ಹೀಗಾಗಿ ಪೂಜಾರಿಯ ಸುತ್ತಲೂ ಅವನ ಪ್ರಭಾವಕ್ಕೆ ಒಳಗಾದ ಜನರು ಸೇರಿ ಒಂದು ಗುಂಪಾಯಿತು. ಜೊತೆಗೆ ವ್ಯವಸಾಯದ ಕ್ರಮ ತಿಳಿದಮೇಲೆ ಎಲ್ಲರೂ ಒಟ್ಟಾಗಿ ಸೇರಿ ಒಬ್ಬೊಬ್ಬರೂ ಒಂದೊಂದು ಕೆಲಸ ಮಾಡಿದರೆ ಸುಖಜೀವನ. ಇಲ್ಲದಿದ್ದಲ್ಲಿ ಪ್ರತಿಯೊಬ್ಬರೂ ತನ್ನ ಕೂಳಿಗೆ ದಿನವೆಲ್ಲ ಅಲೆಯಬೇಕಾಗುತ್ತಿತ್ತು. ಇದು ಜನರು ಒಬ್ಬರನ್ನೊಬ್ಬರು ಸಹಕರಿಸಿ ಬಾಳುವಂತೆ ಮಾಡಿತು. ಹೀಗೆ ಮನುಷ್ಯರ ಗುಂಪುಗಳು ಹುಟ್ಟಿಕೊಂಡವು. ಗುಂಪುಗಳು ಹುಟ್ಟಿಕೊಂಡುದರೊಡನೆ ನಾಯಕತನವು ತಲೆಯೆತ್ತಿತು. ಮೃಗಗಳ ಗುಂಪಿಗೂ ಗುಂಪಿನ ಪ್ರಾಣಿಗಳನ್ನೆಲ್ಲ ಒಟ್ಟಿಗೆ ನಡೆಸುವ ಒಂದು ನಾಯಕ ಪ್ರಾಣಿ ಇದ್ದೇ ಇರುತ್ತದೆ, ಅದು ಆ ಗುಂಪಿನ ಯಾವ ಪ್ರಾಣಿಗಿಂತಲೂ ಶಕ್ತಿಯುಳ್ಳದ್ದು. ಹಾಗೆಯೇ ಮನುಷ್ಯಗುಂಪಿನಲ್ಲಿಯೂ ನಾಯಕ

ನಾದವನು ಶಕ್ತನಾದನು. ಗುಂಪಿನ ಪ್ರತಿವ್ಯಕ್ತಿಯೂ ನಾಯಕನಾದವನಿಗೆ ಹೆದರುತ್ತಿದ್ದುದರಿಂದ ಸಾಧಾರಣವಾಗಿ ಗುಂಪೇ ನಾಯಕನ ಹಿಂದಿತ್ತು. ಮೊದಮೊದಲು ನಾಯಕನೂ ಇತರರಂತೆಯೇ ಕೆಲಸ ಮಾಡುತ್ತಿದ್ದ. ಆದರೆ ಕ್ರಮೇಣ ಅವನು ಕೆಲಸಮಾಡುವುದು ಬಿಟ್ಟು ತನ್ನ ಸಲುವಾಗಿಯೂ ಇತರರು ಕೆಲಸಮಾಡುವಂತೆ ನೋಡಿಕೊಳ್ಳಲು ಪ್ರಾರಂಭಿಸಿದ. ಹೀಗಾಗುವಂತೆ ಮಾಡಿದ ಪೂಜಾರಿಯೂ ನಾಯಕನೂ ಸೇರಿಕೊಂಡು ಒಬ್ಬನು ಶಕ್ತಿಯ, ಇನ್ನೊಬ್ಬನು ಜ್ಞಾನದ ಪ್ರತಿನಿಧಿಯಾದರು. ಇವರು ಮುಳಿದರೆ ಗತಿ! ಸರಿ, ಜನ ಇವರು ಹೇಳಿದಂತೆ ಕೇಳತೊಡಗಿದರು.

## ನಾಯಕ

ಆಗ ಗುಂಪುಗುಂಪಿಗೆ ಆಗಾಗ್ಗೆ ಯುದ್ಧ ನಡೆಯುತ್ತಲೇ ಇತ್ತು. ಆ ಸಂದರ್ಭದಲ್ಲಿ ನಾಯಕ ತಾನು ಮುಂದಾಗಿ ನಿಂತು ಆ ಜಗಳದಲ್ಲಿ ಗೆಲ್ಲುವ ಯುಕ್ತಿ ಶಕ್ತಿಗಳನ್ನು ತೋರುತ್ತಿದ್ದ. ಆದರಿಂದ ಅವನು ಮಿಕ್ಕವರಿಗಿಂತ ಉತ್ತಮನೆಂಬ ಭಾವನೆಯಿಂದ ಭಕ್ತಿಯು ಗುಂಪಿನ ಜನರಲ್ಲಿ ಮೂಡಿತು. ಹೀಗಾಗಿ ಅವನಿಗೆ ಆ ಗುಂಪಿನ ಗಳಿಕೆಯ ಹಿರಿಯಭಾಗ ಸಲ್ಲಲು ಪ್ರಾರಂಭವಾಯಿತು. ಪ್ರತಿಯೊಬ್ಬನೂ ತನ್ನ ಗಳಿಕೆಯಲ್ಲಿ ದೇವರಿಗೆ ಅರ್ಪಿಸುತ್ತಿದ್ದ ವಸ್ತುಗಳಿಂದ ಪೂಜಾರಿಯ ಗಳಿಕೆಯೂ ವೃದ್ಧಿಯಾಯಿತು. ಹೀಗೆ ನಾಯಕ, ಪೂಜಾರಿ ಶಕ್ತಿಯಲ್ಲೂ ಸಂಪತ್ತಿನಲ್ಲೂ ಮಿಕ್ಕವರಿಗಿಂತ ಮೀರಿದರು. ಹೀಗಾದಾಗ ಇತರ ಗುಂಪುಗಳ ಅಥವಾ ಹಳ್ಳಿಗಳ ಮೇಲೆ ಬೇಕಾದಾಗ ಬೀಳುವಂತಿರಬೇಕೆಂದೂ, ತನ್ನ ಉಪಚಾರಕ್ಕೆಂದೂ ಕೆಲವರನ್ನು ಆಹಾರ ಕೊಟ್ಟು ಸೇವೆಗಿಟ್ಟುಕೊಂಡ. ಹೀಗೆಯೇ ಇದು ಮುಂದೆ ಬೆಳೆದು ನಾಯಕ ರಾಜನಾದ; ಅವನ ಸುತ್ತ ಸೇರಿದವರಿಂದ ಸೈನ್ಯವಾಯಿತು. ಪೂಜಾರಿ ಅವನಿಗೆ ಮಂತ್ರಿಯಾದ. ಕೊನೆಗೆ ಜನರಿಗೆ ನಾಯಕನಲ್ಲಿರುವ ಭಕ್ತಿ, ನಂಬಿಕೆ ಅಳಿದರೆ ತಮ್ಮ

ಗುಂಪು ಒಡೆದೀತು, ಹಳ್ಳಿ ಒಡೆದೀತು, ಒಗ್ಗಟ್ಟು ಹೋದೀತು, ಜನರಿಗೆ ಕೇಡಾದೀತು ಎಂಬ ಒಳ್ಳೆಯ ಉದ್ದೇಶದಿಂದಲೋ, ಇಲ್ಲವೆ ತನಗೂ ಕೇಡು ಸಂಭವಿಸೀತು ಎಂಬ ಹೆದರಿಕೆಯಿಂದಲೋ, ಇಲ್ಲ ನಿಜವಾಗಿಯೂ ಹಾಗೆ ಅವನು ನಂಬಿದ್ದುದರಿಂದಲೋ ರಾಜನೇ ದೈವಾಂಶವೆಂದು ಪ್ರಜೆಗಳಿಗೆ ಹೇಳಿದ ಪೂಜಾರಿ. ಅವರು ಅದನ್ನು ನಂಬುವಂತೆ ಮಾಡಿದ. ಆಗ ಆ ಗುಂಪಿಗೆ ಅಥವಾ ಹಳ್ಳಿಗೆ ಅಥವಾ ಹಳ್ಳಿಗಳಿಗೆ ಸೇರಿದ ಎಲ್ಲ ವಸ್ತುವೂ ರಾಜನಿಗೆ ಸೇರಿದುದು. ಅವನ ಅಪ್ಪಣೆಯಂತೆ ಪ್ರಜೆಗಳು ಅದನ್ನು ಅನುಭವಿಸಬೇಕೆಂದಾಯಿತು. ಈ ಕ್ರಮಕ್ಕೆ ತರಲು ಪೂಜಾರಿ ವರ್ಗದ ಜಾಣತನ ಅಪಾರ.

ಹೀಗೆಯೇ ಬೆಳೆದು ಬಂದು, ಗುಂಪು ಹಳ್ಳಿಯಾಗಿ, ಹಳ್ಳಿಗಳು ರಾಜ್ಯವಾಗಿ ಅಲ್ಲಲ್ಲೆ ಸ್ವತಂತ್ರ ಪಾಳೆಯಪಟ್ಟುಗಳು ಹುಟ್ಟಿಕೊಂಡವು.

ಕಾಲಕ್ರಮೇಣ ಮಾನವ ಸಭ್ಯತೆಯ ಮೆಟ್ಟಲುಗಳನ್ನು ಏರುತ್ತ ಹೊರಟ. ಪ್ರಪಂಚದಲ್ಲಿ ಅನುಕೂಲವಾದೆಡೆಗಳಲ್ಲೆಲ್ಲ ಸಂಸ್ಕೃತಿ ಉತ್ತಮವಾಗುತ್ತ ಬಂತು. ಕಲೆ ವೃದ್ಧಿಯಾಯಿತು. ಅದೆಲ್ಲೆಲ್ಲಿ ಎಂಬುದನ್ನು ಮುಂದೆ ನೋಡುತ್ತೇವೆ.





## ಮಾನವ ಬುಡಕಟ್ಟುಗಳು

ಕ್ರಿಸ್ತಪೂರ್ವ ೧೦೦೦೦ ವರ್ಷಗಳ ಸುಮಾರಿನಲ್ಲಿ ಸಾಧಾರಣವಾಗಿ ಈಗಿರುವಂತೆಯೇ ಭೂಗೋಳ ನೆಲ ನೀರಿನ ಪ್ರದೇಶವನ್ನು ಹೊಂದಿತ್ತು. ಮಾನವಕುಲ ಪ್ರಪಂಚದ ಫಲವತ್ತಾದ ಮತ್ತು ಅನುಕೂಲವಾದ ವಾತಾವರಣವಿದ್ದೆಡೆಗಳಲ್ಲೆಲ್ಲ ಅಭಿವೃದ್ಧಿ ಹೊಂದಿತು.



ಹೆಮೆಟಿಕ್

ಮಧ್ಯ ಏಷಿಯಾದಲ್ಲಿ ಔತ್ತರೇಯ ಕಕೇಷಿಯನ್ ಜನರು ಹರಡಿಕೊಂಡಿದ್ದರು. ಇವರ ಮೈಬಣ್ಣ ಬಿಳುಪು; ಸ್ಫುರದ್ರೂಪಿಗಳು. ವಿಶಾಲವಾದ ಕಾಡು, ಹುಲ್ಲುಗಾವಲುಗಳಲ್ಲಿ ಸ್ಥಳದಿಂದ ಸ್ಥಳಕ್ಕೆ ತಮ್ಮ ವಾಸಸ್ಥಳವನ್ನು ಬದಲಾಯಿಸಿಕೊಂಡು ಪಶುಪಾಲನೆ ವೃತ್ತಿಯನ್ನು ಮುಖ್ಯವಾಗಿಟ್ಟುಕೊಂಡು ಲೋಕಾಭಿರಾಮವಾಗಿ ಜೀವಿಸುತ್ತಿದ್ದರು. ಇವರು ಆರ್ಯರ ಬುಡಕಟ್ಟಿಗೆ ಸೇರಿದವರು. ಇವರ ಭಾಷೆ ಆರ್ಯಭಾಷೆ. ಆಫ್ರಿಕಾಖಂಡದ ನೈಲ್‌ನದಿಬೈಲಿನ ಮಿಶ್ರದೇಶದಲ್ಲಿ ಹೆಮೆಟಿಕ್ ಬುಡಕಟ್ಟಿಗೆ ಸೇರಿದ ಕಂದುಬಣ್ಣದ ಜನರು ಅಭಿವೃದ್ಧಿಸ್ಥಿತಿಯಲ್ಲಿದ್ದರು. ಭಾರತಭೂಮಿಯ ಪಶ್ಚಿಮಸಮುದ್ರತೀರ ಮತ್ತು ಪಂಜಾಬು ಪ್ರಾಂತ ದ್ರಾವಿಡ ಜನರದು. ಇವರು ಎಣ್ಣೆಗೆಂಪಿನ ಜನರು. ನಾರ್ಡಿಕ್ ಬುಡಕಟ್ಟಿನ

ಜನರು ಮಧ್ಯಯೂರೋಪಿನ ಕಾಡುಗಳಲ್ಲಿ ಮತ್ತು ಉತ್ತರ ಯೂರೋಪು ಪ್ರದೇಶಗಳಲ್ಲಿ ವಾಸಿಸುತ್ತಿದ್ದರು. ಭೂಮಧ್ಯ ಸಮುದ್ರದ ಪೂರ್ವಪ್ರಾಂತ ಗಳಲ್ಲಿ ಬಗೆಬಗೆಯ ಭಾಷೆಯ ಹಲವು ಒಳಕುಲದ ದಕ್ಷಿಣ ಕಕೇಶಿಯನ್ ಜನರು ಬಾಳುತ್ತಿದ್ದರು. ಸುಮೇರಿಯನ್ನರು, ಸೆಮಟಿಕ್ಕರು, ಯೆಹೂದಿ ಗಳು ಮೊದಲಾದವರು ಈ ಬುಡಕಟ್ಟಿಗೆ ಸೇರಿದವರು. ಗುಂಗುರು ಕೂದಲು, ಕಪ್ಪುಬಣ್ಣದ ದಪ್ಪತುಟಿಯ ನೀಗ್ರೋ ಜನರು ಆಫ್ರಿಕಾ ಖಂಡದಲ್ಲಿ ತುಂಬಿದ್ದರು. ಚೀನ ಮತ್ತು ಪೂರ್ವ ಏಷ್ಯದ ಪ್ರಾಂತ್ಯಗಳು ಹಾಗೂ ಅಮೇರಿಕದಲ್ಲಿ—ಆಗ ಅಮೇರಿಕ-ಏಷ್ಯದ ಭೂಭಾಗ ಉತ್ತರದಲ್ಲಿ ಹೊಂದಿಕೊಂಡಿದ್ದಿತು. ಹಳದಿ ಬಣ್ಣದ ಉಬ್ಬಿದ ಕೆನ್ನೆಮೂಳೆಯ ಸಣ್ಣಕಣ್ಣಿನ ಮಂಗೋಲಿರ್ಯ ಜನರು ವೃದ್ಧಿಹೊಂದಿದ್ದರು. ಮಂಗೋಲಿರ್ಯ ಕುಲದ ತವರು ಯೂರಲ್ ಪರ್ವತದ ಪೂರ್ವತಪ್ಪಲು ಪ್ರಾಂತ. ಅಲ್ಲಿಂದ ಅವರು ಈ ಪ್ರಾಂತಗಳಿಗೆ ವಲಸೆ ಬಂದರು. ಮೇಲೆ ಹೇಳಿದ ಒಂದೊಂದು ಬುಡಕಟ್ಟಿನವರು ತಮ್ಮದೇ ಆದ ಭಾಷೆಗಳನ್ನಾಡುತ್ತಿದ್ದರೂ ಒಂದೇ ಬುಡಕಟ್ಟಿನಲ್ಲಿ ಬೇರೆ ಬೇರೆ ಭಾಷೆಗಳನ್ನಾಡುವ ಬೇರೆ ಬೇರೆ ಗುಂಪುಗಳಿದ್ದವು.



ನೀಗ್ರೊ

**ಒಂದೇ ಬುಡಕಟ್ಟು**

ಸಾಧಾರಣವಾಗಿ ಮಾನವನ ಉದ್ಭವ ಒಂದೇ ಬುಡಕಟ್ಟಿಗೆ ಸೇರಿದುದೆಂದು ಹೇಳಬಹುದು. ಸಂತತಿ ಅಭಿವೃದ್ಧಿ ಹೊಂದಿದಂತೆ ದೇಶವಿದೇಶಗಳಲ್ಲಿ ಹರಡಿಕೊಂಡಂತೆ ಕಾಲಕ್ರಮೇಣ ಬುಡಕಟ್ಟುಗಳ ಭೇದ ಹುಟ್ಟ

ಕೊಂಡಿತು. ಚರ್ಮ, ಬಣ್ಣ, ತಲೆಯ ಸ್ವರೂಪ, ಮುಖದ ಆಕಾರ, ತಲೆಕೂದಲಿರುವ ರೀತಿ ಇವುಗಳಲ್ಲಿ ನಿಷ್ಕೃಷ್ಟವಾದ ಭೇದ ಕಾಣುತ್ತಾ ಬಂತು. ಇದು ಆಯಾಯ ದೇಶದ ಮಣ್ಣು, ವಾತಾವರಣಕ್ಕೆ ಸಂಬಂಧಪಟ್ಟದ್ದು. ಆಫ್ರಿಕಾದಲ್ಲಿ ಭೂಮಧ್ಯರೇಖೆಯ ಬಳಿ ವಾಸಿಸುವ ಜನರು ಬಿಸಿಲ ಬೇಗೆಯಲ್ಲಿ ತಲತಲಾಂತರದಿಂದ ಬಾಳಿಬಾಳಿ ಅವರ ಚರ್ಮದ ಬಣ್ಣ ಕಪ್ಪಾಯಿತು. ಹಾಗೆಯೇ ಭೂಮಧ್ಯರೇಖೆಗೆ ದೂರ ದೂರ ವಾಸಿಸುವ ಜನರ ಬಣ್ಣದಲ್ಲಿ ಕಪ್ಪು ಕಡಮೆಯಾಗುತ್ತಾ ಬಂತು. ಇದೇ ರೀತಿ ಭೂಗೋಳದ ಮೇಲೆ ಹಂಚಿಹೋದ ಜನರು ಅವರವರದೇ ಆದ ಒಂದು ಸಂಸ್ಕೃತಿಯನ್ನು ಬೆಳೆಸಿಕೊಂಡರು. ಆ ಸಂಸ್ಕೃತಿಯ ಬೆಳವಣಿಗೆ ಆಯಾಯ ಪ್ರಾಂತದ ಸನ್ನಿವೇಶಗಳನ್ನವಲಂಬಿಸಿತ್ತು. ಭಾಷೆಯೂ ಕೂಡ ಹೀಗೆಯೇ ಬೆಳೆದುದು.



ದಕ್ಷಿಣ ಕಕೇಶಿಯನ್

## ಒಂದೇ ಸಂಸ್ಕೃತಿ

ಈಗ ಬೇರೆ ಬೇರೆ ಜನಾಂಗ ಬೇರೆ ಬೇರೆ ಸಂಸ್ಕೃತಿ ಎನ್ನುವ ಮಾತು ಏಕೋ ಅಸಹ್ಯವಾಗಿ ಕಾಣುತ್ತದೆ. ಮಾನವಕುಲವೇ ಒಂದು ಎಂಬ ಭಾವನೆ ಬರುತ್ತಿದೆ. ಕಾಡುಮನುಷ್ಯನ ಅಜ್ಞಾನ ಮೌಢ್ಯಗಳು ಅಳಿದು ಸಭ್ಯತೆಯೇ ಒಂದು ಸಂಸ್ಕೃತಿ ಎಂಬುದನ್ನು ನಾವು ಯೋಚಿಸತೊಡಗಿದ್ದೇವೆ. ಸೊಗಸುಗಾರ ಪುಟ್ಟಸ್ವಾಮಿಯಾಗಿ ಉಡುಪು ಧರಿಸಿರುವ ಮನುಷ್ಯ ಮೃಗದಂತೆ ವರ್ತಿಸಿದರೆ ಅವನನ್ನು ನಾವಾರೂ ಸಂಸ್ಕೃತನೆಂದೆನ್ನುವುದಿಲ್ಲ. ಎಷ್ಟೇ ಕಮ್ಮಿ ಬಟ್ಟೆ ಉಟ್ಟಿರಲಿ ಸದಾಚಾರಿಯನ್ನು

ನಾವು ಸಭ್ಯನೆನ್ನುತ್ತೇವೆ. ಹೀಗೆ ಯಾವ ಸಂಸ್ಕೃತಿಯೇ ಆಗಲಿ ಅದರಲ್ಲಿ ಕೆಟ್ಟದೇನಿದ್ದರೂ ಕುರುಡು ನಂಬಿಕೆಯಿಂದ ಅದನ್ನೇ ನನ್ನ ಜನಾಂಗದ



ಆರ್ಯ

ಗುರುತು, ಅದೇ ನನ್ನ ಸಂಸ್ಕೃತಿ ಎಂದು ಹಟ ಹಿಡಿದರೆ ಅವನು ಮೂರ್ಖನೇ ಸರಿ. ಯಾವುದಾದರೂ ಆಗಲಿ, ಅದಾವ ಹೆಸರಿನ ಸಂಸ್ಕೃತಿಯಲ್ಲಾದರೂ ಇರಲಿ, ಒಳ್ಳೆಯದು ನನ್ನದು ಎನ್ನುವ ಭಾವವೇ ಉತ್ತಮವಾದದ್ದು. ಒಳ್ಳೆಯದನ್ನೆಲ್ಲ ಉಳಿಸಿಕೊಂಡು ಕೆಟ್ಟದ್ದನ್ನೆಲ್ಲಾ ಜಾಲಿ ತೆಗೆದುಹಾಕುವುದೇ ಸಂಸ್ಕೃತಿ; ಅದೇ ಧರ್ಮ. ಆಚಾರ ವ್ಯವಹಾರಗಳೆಲ್ಲ ಧರ್ಮವಲ್ಲ. ಮೂಢಾಚಾರವೇ ಧರ್ಮವೆಂದು ನಂಬುವುದು ಮೂರ್ಖತನ. ಬಾಳಿನಲ್ಲಿ ಸತ್ಯದದಾರಿ ಹಿಡಿದವನು ಮಾತ್ರ ಧರ್ಮಾತ್ಮ.

## ಒಂದೇ ಜನಾಂಗ

ಜನಾಂಗಗಳ ಪ್ರಶ್ನೆಯೂ ಅದೇ ಗತಿಯಲ್ಲಿ ನಡೆದಿದೆ. ಹಿಂದೆ ಹೇಳಿದ ನಾನಾಜನಾಂಗಗಳಿಗೆ ಈಗ ಸ್ಥಾನವೇ ಇಲ್ಲ, ಈಗೀಗ ಮೊದಲಿದ್ದಂತೆ ರೂಪುರೇಖೆಯಲ್ಲಿಯೂ ಆ ಭೇದ ಮರೆಯಾಗುತ್ತಾ ಬಂದಿದೆ. ಬೆಳಗಾದರೆ ಒಂದು ದೇಶದವರೊಡನೆ ಮತ್ತೊಂದು ದೇಶದವರು ವ್ಯವಹಾರ ಬೆಳಸುತ್ತಾರೆ; ಸಂಬಂಧ ಬೆಳೆಯುತ್ತದೆ. ಇಂದು ಒಂದು ವಾತಾವರಣ ನಾಳೆಯೊಂದು ವಾತಾವರಣದಲ್ಲೀಗ ಜನ ಓಡಾಡುತ್ತಾರೆ. ಬೇರೆ ಬೇರೆ ಧರ್ಮಗಳನ್ನು ತಿಳಿದು ತುಲನೆ ಮಾಡಿ ಒಳ್ಳೆಯದನ್ನೆಲ್ಲ ತನ್ನದಾಗಿ ಮಾಡಿಕೊಳ್ಳುವ ಭಾವನೆ ಜನರಲ್ಲಿ ಬೆಳೆಯುತ್ತಿದೆ. ಹಿಂದೆ ಹದಿನಾಲ್ಕು ಲೋಕಗಳೆಂದು ತಿಳಿದಿದ್ದ ಭೂಲೋಕ ಈಗ ಜನರಿಗೆ ಬಹಳ ಚಿಕ್ಕದಾಗಿ ಕಾಣುತ್ತಿದೆ. ರೈಲು, ಜಹಜು, ವಿಮಾನಗಳ ಸಹಾಯದಿಂದ ಬೇಕಾದರೆ ಕೆಲವೇ ದಿನಗಳಲ್ಲಿ ಸಪ್ತಸಾಗರವನ್ನು ದಾಟಿ ಈ ಲೋಕದ ಮೂಲೆಮೂಲೆಯನ್ನು ಹೊಕ್ಕು ಬರಲು ಸಾಧ್ಯ. ರೇಡಿಯೋ ಸಹಾಯದಿಂದ ಭೂಲೋಕದ ಆಯಾಯ ದಿನದ ವರ್ತಮಾನವನ್ನೆಲ್ಲ ಕೂತಲ್ಲಿ ಕೇಳಲು ಸಾಧ್ಯ. ಕೂತಲ್ಲೇ ತಾನು ಅಪೇಕ್ಷಿಸುವ ಜನರನ್ನು ನೋಡುವ ಮಾತಾಡುವ ಸಲಕರಣೆಗಳು ಒದಗುತ್ತಿವೆ.


ಮಂಗೋಲಿಯನ್

ಹೀಗಿರುವಾಗ ಬೇರೆಬೇರೆ ಸಂಸ್ಕೃತಿಯೆಂದು ಒಂದು ಗೆರೆ ಎಳೆಯುವುದಕ್ಕಾಗಲಿ ಬೇರೆ ಬೇರೆ ಧರ್ಮವೆಂದು ಒಂದು ಭೇದ ತೋರಿಸುವುದ

ಕ್ಕಾಗಲಿ ಬೇರೆ ಬೇರೆ ಜನಾಂಗವೆಂದು ಅಡ್ಡಗಟ್ಟುವುದಕ್ಕಾಗಲಿ ಹೊರ ಡುವ ಕಾಲ ಮಿೀರಿದೆ. ಈಗ ಒಟ್ಟು ಪ್ರಪಂಚದ ವಿಶಾಲ ದೃಷ್ಟಿ ನಮಗೆ ಬರಬೇಕಾಗಿದೆ. ಒಟ್ಟು ಮಾನವಕೋಟಿಯೇ ಒಂದು ಜನಾಂಗದಂತೆ ಬಾಳಬೇಕಾಗಿದೆ. ಆ ಜನಾಂಗದಲ್ಲಿ ಒಂದೊಂದು ದೇಶವೂ ಒಂದೊಂದು ಸಂಸಾರವಿದ್ದಂತೆ ಒಂದರ ಅಭಿವೃದ್ಧಿಗೊಂದು ಅಡ್ಡಬರದೆ ಒಂದ ಕ್ಕೊಂದು ನೆರವಾಗಿ ಪ್ರಪಂಚ ನಡೆಸಬೇಕಾಗಿದೆ. ಹಾಗಾಗಬೇಕಾದರೆ ಒಳ್ಳೆಯದನ್ನೆಲ್ಲ ಆಲೋಚಿಸಿಕೊಂಡು ಸಮಾಜದ, ದೇಶದ, ಪ್ರಪಂಚದ ಸುಖಶಾಂತಿ ದೃಷ್ಟಿ ಹೊಂದಿ ಬಾಳಬೇಕು.





## ಪುರಾತನ ಸಂಸ್ಕೃತಿಗಳು

ನಾವೀಗ ಹತ್ತಿರ ಹತ್ತಿರ ಏಳುಸಾವಿರ ವರ್ಷಗಳ ಹಿಂದಿನ ಕಾಲದ ವರೆಗೆ ಬಂದಿದ್ದೇವೆ. ಇಷ್ಟರಲ್ಲಾಗಲೆ ಏಷ್ಯಾ, ಆಫ್ರಿಕ ಖಂಡಗಳ ಹಲವು ಪ್ರದೇಶಗಳು ತನ್ನತನ್ನದೇ ಆದ ಒಂದೊಂದು ಸಂಸ್ಕೃತಿಯನ್ನು ಹೊಂದಿದ್ದವು. ಈ ಪುರಾತನ ಸಂಸ್ಕೃತಿಗಳು ಸಾಮಾನ್ಯವಾಗಿ ಒಂದೇ ಮಟ್ಟದವಾದರೂ ಅಲ್ಲಿ ಅಲ್ಲಿನ ಸನ್ನಿವೇಶವನ್ನನುಸರಿಸಿ ಭಿನ್ನತೆಯನ್ನು ಹೊಂದಿದ್ದವು. ಆದರೂ ಆ ಎಲ್ಲ ಸಂಸ್ಕೃತಿಗಳೂ ಭವ್ಯವಾದವುಗಳೆಂಬುದನ್ನು ಮುಂದೆ ನೋಡುತ್ತೇವೆ.

ಈ ಸಂಸ್ಕೃತಿಯನ್ನು ಬೆಳಗಿದ ರಾಷ್ಟ್ರಗಳು ಮುಖ್ಯವಾಗಿ ಇವು: ಮಿಶ್ರದೇಶ (ಈಜಿಪ್ಟ್), ಕ್ರೀಟ್, ಮೆಸಪೊಟೋಮಿಯ, ಭಾರತವರ್ಷ, ಚೀನ ಈ ಐದು ಮಹಾರಾಷ್ಟ್ರಗಳು. ಈ ರಾಷ್ಟ್ರಗಳೆಲ್ಲ ವ್ಯವಸಾಯಾಭಿವೃದ್ಧಿಯ ರಾಷ್ಟ್ರಗಳಾಗಿದ್ದವು. ಎಲ್ಲೆಲ್ಲಿ ನೆಲ ಫಲವತ್ತಾಗಿದ್ದು ನೀರಿನ ಆಸರೆ ಸಿಕ್ಕಿತೋ ಎಲ್ಲೆಲ್ಲಿ ಬೆಳೆ ಬೆಳೆದು ಫಲ ಕೊಡುವಂತಿತ್ತೋ ಅಲ್ಲಲ್ಲೇ ಈ ರಾಷ್ಟ್ರಗಳ ಉದ್ಭವ. ಕೃಷಿ ಪ್ರಧಾನವಾದ ರಾಷ್ಟ್ರಗಳವು. ಆದರೂ ಆಗ ಶಿಲ್ಪಶಾಸ್ತ್ರ, ಪುರರಚನೆ, ಚಿತ್ರಕಲೆ ಇವೆಲ್ಲವೂ ಮೇಲ್ಮಟ್ಟಕ್ಕೇರಿದ್ದವು. ಸಂಚಾರ ಸೌಲಭ್ಯ ಅನುಕೂಲವಾಗಿ ವ್ಯವಸ್ಥೆಗೊಳಿಸಲಾಗಿತ್ತು. ಜನ ದೊಡ್ಡದಾಗಿ ಯೋಚಿಸುತ್ತಿದ್ದರು; ದೊಡ್ಡ ಕೆಲಸಗಳನ್ನು ಮಾಡುತ್ತಿದ್ದರು. ಆ ನಮ್ಮ ಪುರಾತನರ ಕಥೆಗೆ ಆಧಾರ ಅವರು ನಡೆಸಿದ ಅದ್ಭುತ ರಚನೆಗಳ ಅವಶೇಷಗಳು. ಈಗ ಉಳಿದಿರುವ ಅವಶೇಷಗಳಿಂದಲೆ ಅವರ ವೈಭವಯುತವಾದ ಕಥೆ ಸಂಪೂರ್ಣವಾಗಿ ಗೊತ್ತಾಗದಿರಬಹುದು. ಆದರೂ ಅವು ನಮಗೆ ಸಾಕಾದಷ್ಟನ್ನು ತಿಳಿಸುತ್ತವೆ.

**ಮಿಶ್ರದೇಶ :**



ಆಫ್ರಿಕದ ಉತ್ತರಕ್ಕೆ ನೈಲ್‌ನದಿಯ ಎರಡು ಪಕ್ಕಕ್ಕೂ ಹರಡಿದ ಪ್ರಾಂತ. ಆ ದೇಶದ ಅಭ್ಯುದಯಕ್ಕೆ ಆಧಾರ ನೈಲ್ ನದಿ. ನೈಲ್ ನದಿ ಮಳೆಗಾಲದಲ್ಲಿ ಪ್ರವಾಹ ತುಂಬಿ ಬಂದು ಮೇರೆ ಮೀರಿ ತನ್ನ ಎರಡು ಪಕ್ಕಗಳ ಬೈಲಿನ ಮೇಲೆ ಉಕ್ಕಿ ಹಲವು ಮೈಲಿಗಳ ದೂರ ಮೆಕ್ಕಲನ್ನು ಹರಡಿ ಆ ಪ್ರದೇಶವನ್ನು ತುಂಬಾ ಫಲವತ್ತಾಗಿ ಮಾಡುತ್ತದೆ. ಶೈತ್ಯವಿಲ್ಲದ ಹವಾಗುಣವುಳ್ಳ ಈ ಭೂಮಿಯಲ್ಲಿ ಕ್ರಿ. ಪೂ. ೫೦೦೦ ವರ್ಷಗಳ ಹೊತ್ತಿಗೆ ಆಗಲೆ ರಾಜ್ಯಾಡಳಿತ ಕ್ರಮವಾಗಿ ಪ್ರಾರಂಭವಾಗಿ ಮೊದಲನೆ ರಾಜಮನೆತನದ ರಾಜ ಆಳುತ್ತಿದ್ದನು. ಅಲ್ಲಿಂದ ಕ್ರಿ. ಪೂ. ೪೦೦ ವರ್ಷದವರೆಗೆ ಅಂದರೆ ಅಲೆಗ್ಸಾಂಡರನ ಧಾಳಿಯವರೆಗೆ ಒಂದಾದಮೇಲೊಂದರಂತೆ ೩೧ ರಾಜಮನೆತನಗಳು ಸುಸೂತ್ರವಾಗಿ ಆಡಳಿತ ನಡೆಸಿದವು. ಕ್ರಿ. ಪೂ. ೫೦೦೦ ದಿಂದ ೩೫೦೦ ರ ವರೆಗಿನ ಕಾಲದಲ್ಲಿ ಈಜಿಪ್ಟಿನ ರಾಜ್ಯಾಡಳಿತ ಸುಸಂಘಟಿತವಾಗಿ ಪ್ರಖ್ಯಾತವಾಗಿತ್ತು. ಆ ಕಾಲದಲ್ಲಿ ಕಲೆಯ ಬೆಳವಣಿಗೆ ತಡೆಬಡೆಯಿಲ್ಲದೆ ಅದ್ಭುತ ರೀತಿಯಲ್ಲಿ ಬೆಳೆಯಿತು. ಮಿಶ್ರದೇಶದ ಜನರಿಗೆ ಅದ್ಭುತ ಕೆಲಸಗಳಲ್ಲಿ ಆಸೆಯೆಂದು ಕಾಣುತ್ತದೆ. ಅಂತಹ ಆಸೆಗಳ ಫಲವಾಗಿಯೇ ಲೋಕಪ್ರಖ್ಯಾತವಾಗಿ ಆಶ್ಚರ್ಯವನ್ನುಂಟುಮಾಡುವ ಅದ್ಭುತಾಕೃತಿಯ 'ಪಿರಮಿಡ್' ಗಳು ಕಟ್ಟಲಾಗಿವೆ. ಇವು ರಾಜರು ತಾವು ಸತ್ತಮೇಲೆ ತಮ್ಮ ಹೆಣಗಳನ್ನಿಡಲು ಸಲುವಾಗಿ ಕಟ್ಟಿಕೊಂಡ ಗೋರಿಗಳು. ಪಿರಮಿಡ್‌ಗಳ ಹತ್ತಿರದಲ್ಲಿಯೇ ಸ್ತ್ರೀ ಮುಖದ ಸಿಂಹಾಕೃತಿಯ ಅದ್ಭುತಾಕಾರದ ಸ್ಫಿಂಕ್ಸ್ ಎಂಬ ವಿಗ್ರಹದ ರಚನೆಯಾಗಿದೆ. ಇವುಗಳನ್ನು ಒಂದೇ ಕಲ್ಲಿನಿಂದ ಕೆತ್ತಲಾಗಿದೆ.

ಈ ಪಿರಮಿಡ್‌ಗಳು ಅತಿ ದೊಡ್ಡವೂ ಹಾಗೂ ಅತ್ಯಂತ ಪ್ರಾಚೀನಕಾಲದವುಗಳು. ಹತ್ತಿರ ಹತ್ತಿರ ೭೦೦೦ ವರ್ಷಗಳಿಂದಲೂ ಸರ್ವನಾಶಕಾರಿಯಾದ ಕಾಲದ ಪರಿಣಾಮಗಳನ್ನು ಮೆಟ್ಟಿ ನಿಂತಿವೆ. ತನ್ನದಲ್ಲವೆಂಬುದೇನನ್ನಾದರು ಹಾಳುಮಾಡುವ ಧಾಳಿಕಾರರ ಕೈ ಕೂಡ ಅವನ್ನು ವಿರೂಪಗೊಳಿಸುವ ಧೈರ್ಯವಾಡಿಲ್ಲ. ಹೀಗಾಗಿ ಈಗಲೂ ಕೂಡ ಯಾರು ಬೇಕಾದರೂ ನೋಡಬಹುದಾಗಿವೆ. ಅವುಗಳು ಎಂದಿನಂತೆಯೇ ಅಚ್ಚಳಿಯದೆ ನಿಂತಿವೆ.



ಪಿರಮಿಡ್ ಮತ್ತು ಸ್ಪಿಂಕ್ಸ್

ಪಿರಮಿಡ್‌ಗಳ ನಿರ್ಮಾಣದಲ್ಲಿ ಅತ್ಯಂತ ಅದ್ಭುತವಾದ ವಿಚಾರವೆಂದರೆ – ಅವುಗಳೊಳಗಿನ ಸಣ್ಣ ಮಾರ್ಗ ಮತ್ತು ಗುಪ್ತ ಕೋಣೆಯನ್ನು ಬಿಟ್ಟುಬಿಟ್ಟರೆ–ಅವು ಸಂಪೂರ್ಣವಾಗಿಯೂ ಘನೀಭೂತವಾಗಿರುವುದು.

ಈಗಿನ ನಮ್ಮ ಕಾಲದಲ್ಲಿ ಎಷ್ಟು ಶಕ್ತಿ ಪೂರ್ಣವಾದ ಯಂತ್ರಗಳನ್ನು ಉಪಯೋಗಿಸಿದರೂ ಹತ್ತಿರ ಹತ್ತಿರ ೫೦೦೦ ವರ್ಷಗಳ ಹಿಂದೆ ಕಟ್ಟಿರುವ ಈ ಪಿರಮಿಡ್‌ಗಳಷ್ಟು ಬಲವಾಗಿ ಪಿರಮಿಡೊಂದನ್ನು ಕಟ್ಟಲಾರೆವು. ಗಾರೆಯೊಂದಿಗೆ ಕಲ್ಲುಗಳನ್ನು ಸೇರಿಸುವುದರಲ್ಲಿ ತೋರಿಸಿರುವ ಕೌಶಲವನ್ನು ಆಧುನಿಕ ಶಿಲ್ಪ ಕೆಲಸವಾವುದೂ ಅನುಕರಿಸಲಾರದು.



ಮಿಶ್ರದೇಶದಲ್ಲಿ ಗೋರಿಗಳ ಗೋಡೆಗಳಮೇಲೆ ಆ ಪುರಾತನರು ಚಿತ್ರಿಸಿರುವ ಚಿತ್ರಗಳಲ್ಲಿ ಕೆಲವು

ದೊಡ್ಡ ಪಿರಮಿಡ್ ಹತ್ತಿರ ಹತ್ತಿರ ಹದಿಮೂರು ಎಕರೆ ಪ್ರದೇಶವನ್ನಾಕ್ರಮಿಸಿದೆ. ಪ್ರತಿಯೊಂದು ಪಕ್ಕವೂ ತಳದಲ್ಲಿ ೭೬೪ ಅಡಿ ಉದ್ದ

ವಾಗಿದೆ ಮತ್ತು ನೆಲದ ಮಟ್ಟದಿಂದ ೪೮೦ ಅಡಿಯವರೆಗೆ ಎದ್ದು ನಿಂತಿದೆ. ಕಟ್ಟಡ ಕಟ್ಟಲು ಉಪಯೋಗಿಸಿದ ಕಲ್ಲು ಗಾರೆಯತೂಕ ೭೦ ಲಕ್ಷ ಟನ್‌ಗಳಿಗಿಂತ ಹೆಚ್ಚಾಗಿತ್ತೆಂದು ಲೆಕ್ಕಹಾಕಲಾಗಿದೆ. ಪ್ರತಿಯೊಂದೂ ಎರಡೂವರೆ ಟನ್ ಭಾರ ತೂಕವಿದ್ದ ೧೦ ಲಕ್ಷ ಗಟ್ಟಿ ಕಲ್ಲುಗಳನ್ನು ಕಟ್ಟಡ ಕಟ್ಟಲು ಉಪಯೋಗಿಸಲಾಗಿದೆ. ಈ ಮಹಾಕಾರದ ಕಲ್ಲುಬಂಡೆಗಳನ್ನು ಕಟ್ಟಡ ಎತ್ತರ ಎತ್ತರ ಎದ್ದಂತೆ ಕಟ್ಟಡದಮೇಲಟ್ಟಣಿಕೆಗೆ ಹೇಗೆ ಒಯ್ಯಲಾಯಿತು ಎಂಬುದನ್ನಾಗಲಿ, ಅವುಗಳನ್ನು ಅವುಗಳ ಗೊತ್ತಾದ ಸ್ಥಾನದಲ್ಲಿ ಹೇಗೆ ಎತ್ತಿ ಇಡಲಾಯಿತು ಎಂಬುದನ್ನಾಗಲಿ ಹೇಳುವುದು ಕಷ್ಟವಾಗಿದೆ.

ಜನರು ರಾಜನೇ ದೇವರೆಂದು ನಂಬಿದ್ದುದರಿಂದ ಅವನಿಗಾಗಿ ಕಟ್ಟಲಾಗುತ್ತಿದ್ದ ಈ ಅದ್ಭುತ ಗೋರಿಗಳ ನಿರ್ಮಾಣಕ್ಕೆ ಸಂಪೂರ್ಣ ನೆರವಾಗುತ್ತಿದ್ದರು. ಆದರೆ ಈ ಪಿರಮಿಡ್‌ಗಳನ್ನು ಕಟ್ಟಲು ಸಂಸ್ಕೃತಿಯಲ್ಲಿ ಹಿಂದುಳಿದಿದ್ದ ಜನರನ್ನು ಸೆರೆಹಿಡಿದು ತಂದು ಅವರನ್ನು ಗೋಳುಹುಯ್ದು ಅವರಿಂದ ಗೆಯ್ಮೆ ತೆಗೆದುಕೊಂಡರು.

ಚಿನ್ನದ ಮಾಯಾಶಕ್ತಿಗಳ ಅನುಕೂಲಗಳು ಇಷ್ಟರಲ್ಲಿಯೇ ಸ್ಪಷ್ಟವಾಗಿತ್ತು. ಚಿನ್ನ ಹೆಚ್ಚು ಬಾಳಿಕೆ ಬರುವಂತಹದೂ ಮತ್ತು ಸುಂದರವೂ ಆಗಿದ್ದಿತು. ಅದರ ಕೀರ್ತಿ ಹೆಚ್ಚಿದಂತೆಲ್ಲ ಚಿನ್ನವನ್ನು ಹುಡುಕುವ ಚಟ ಮುಂದುವರಿಯಿತು. ಈ ಅನ್ವೇಷಣವನ್ನು ಮಿಶ್ರದೇಶದಿಂದ ಅನತಿದೂರ ಪ್ರಾಂತಗಳಿಗೆ ಪ್ರಾಚೀನ ಸಂಸ್ಕೃತಿ ಹರಡಲು ಒಂದು ಮುಖ್ಯ ಕಾರಣವಾಗಿರಬೇಕೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಕೊನೆಗೆ ಈ ಸಂಶೋಧನೆಗಳ ಜ್ಞಾನವು ಮಿಶ್ರದೇಶದವರಿಂದ ಹಿಂದೂಸ್ಥಾನಕ್ಕೂ, ಯೂರೋಪಿಗೂ, ಚೀನಾ, ಅಮೆರಿಕಾಖಂಡ ಹಾಗೂ ಪೆಸಿಫಿಕ್ ದ್ವೀಪಗಳಿಗೂ ಹರಡಿರಬೇಕು. ಇದು ಜನರು ಹೆಚ್ಚು ಹೆಚ್ಚು ಜ್ಞಾನಗಳಿಸಲು ಸಹಕಾರಿಯಾಯಿತು.

ಮಾನವನ ವ್ಯವಹಾರಗಳಲ್ಲಿ ಸ್ವರ್ಗೀಯ ವಸ್ತುಗಳ ಪ್ರಭಾವವಿದೆ ಎಂದು ನಂಬಿಕೆಯಿಟ್ಟಿದ್ದ ಪ್ರಾಚೀನಕಾಲದ ಮಿಶ್ರದೇಶೀಯರು ಸೂರ್ಯ ಮತ್ತು ನಕ್ಷತ್ರಗಳನ್ನು ದೇವರಪಂಗ್ತಿಗೆ ಸೇರಿಸಿಬಿಟ್ಟರು. ಅದ್ಭುತವಾದ ದೈವೀಶಕ್ತಿ ಆಕಾಶದಿಂದ ಒದಗುವುದೆಂಬುದು ಅವರ ನಂಬಿಕೆ. ಸತ್ತುಹೋದ ರಾಜರುಗಳು ಹೋಗುವುದೂ ಮತ್ತು ಅಮರರಾಗುವುದೂ ಅಲ್ಲಿಯೇ ಎಂದು ಅವರು ಊಹಿಸಿದ್ದರು. ಹೀಗೆ ಅವರು ದೇವತೆಗಳನ್ನು ನಿರ್ಮಿಸಿದರು. ಸ್ವರ್ಗೀಯ ವಸ್ತುಗಳಿಗೆ ಜೀವವನ್ನು ಹತೋಟಿಯಲ್ಲಿಟ್ಟುಕೊಳ್ಳುವ ಶಕ್ತಿಯಿದೆಯೆಂಬ ತತ್ವವನ್ನೂ ನಂಬಿದ್ದರು. ಅದಕ್ಕಾಗಿ ಆಕಾಶದಕಡೆ ಅವರ ಆಸಕ್ತಿ ಬೆಳೆಯಿತು. ಇದರ ಪರಿಣಾಮವಾಗಿ ಜ್ಯೋತಿಷ್ಯ ಉದಿಸಿತು; ಹಾಗೂ ಗ್ರಹ ನಕ್ಷತ್ರಗಳ ಚಲನೆಗಳನ್ನೂ ನೈಲ್‌ನದಿಯ ಪ್ರವಾಹಗಳನ್ನೂ ಊಹಿಸಿ ಹೇಳುವ ಬಿಕ್ಕಟ್ಟಿನಿಂದ ಕೂಡಿದ ಸಮಸ್ಯೆ ಗಣಿತಶಾಸ್ತ್ರದ ಉದಯಕ್ಕೆ ಸ್ವಲ್ಪಮಟ್ಟಿಗೆ ಉತ್ತೇಜನ ಕೊಟ್ಟಿತು. ಆಹಾರಪದಾರ್ಥಗಳನ್ನು ಬೆಳೆಯುವ ಮತ್ತು ಕಟ್ಟಡಗಳ ಉಪಕರಣಗಳನ್ನು ತಯಾರು ಮಾಡುವ ವಿಧಾನಗಳು ಮುಂದುವರಿದಂತೆಲ್ಲ, ವಸ್ತುಗಳನ್ನು ಸಂಗ್ರಹಿಸುವ ಸಮಸ್ಯೆಗಳು ತಲೆದೋರಿ ಒಡೆತನ ಪ್ರಾರಂಭವಾಯಿತು. ನೈಲ್‌ನದಿಯ ಪ್ರವಾಹದಲ್ಲಿ ಮುಳುಗಿಹೋದ ಪ್ರದೇಶಗಳನ್ನು ಪರಿಶೀಲಿಸುವುದಕ್ಕೋಸ್ಕರ ಪ್ರಾಯೋಗಿಕ ಜ್ಯಾಮಿತಿಯು ಬೆಳೆಯಿತು. ಇದರಿಂದ ಪ್ರವಾಹಗಳು ನಿಂತಮೇಲೆ ಎಲ್ಲೆಗಳನ್ನು ಮತ್ತೆ ಊರ್ಜಿತಗೊಳಿಸುವಂತಾಯಿತು. ಆಸ್ತಿಯ ವಿನಿಮಯದಲ್ಲಿ ಅನುಕೂಲಗಳನ್ನೇರ್ಪಡಿಸುವುದಕ್ಕೋಸ್ಕರ ಗಣಿತ ಲೆಕ್ಕಾಚಾರವನ್ನು ಅಭಿವೃದ್ಧಿಗೊಳಿಸಲಾಯಿತು.

ಅಂತು ಒಟ್ಟಿನಲ್ಲಿ ಮಿಶ್ರದೇಶ ತನ್ನದೇ ಆದ ಒಂದು ಸಂಸ್ಕೃತಿಯನ್ನು ಬೆಳೆಸಿಕೊಂಡು ಮೇಲುಮಟ್ಟದಲ್ಲಿತ್ತು. ಅಲ್ಲಿಯವರು ಶಿಲ್ಪಕಾರ್ಯದಲ್ಲೂ, ಚಿತ್ರಬರೆಯುವುದರಲ್ಲೂ ನೈಪುಣ್ಯತೆಯನ್ನು ಹೊಂದಿದ್ದರು. ಅವರಲ್ಲಿ ಧಾರ್ಮಿಕಜ್ಞಾನ ವಿಸ್ತಾರವಾಗಿ ಬೆಳೆದಿತ್ತು. ಅನೇಕ

ದೇವತೆಗಳನ್ನು ಪೂಜಿಸುತ್ತಿದ್ದರು. ಇವರಲ್ಲಿ ಕೆಲವು ಕುಲದೇವತೆಗಳು, ಕೆಲವು ಪ್ರಕೃತಿದೇವತೆಗಳು. ದೇವತೆಗಳನ್ನು ಮನುಷ್ಯ ಅಥವಾ ಪ್ರಾಣಿಗಳ ರೂಪಿನಲ್ಲಿ ಚಿತ್ರಿಸಿ ಪೂಜಿಸುವ ರೂಢಿ ಬೆಳೆದಿತ್ತು. ಗೋವು ಅವರ ನಿತ್ಯಜೀವನದಲ್ಲಿ ಬಹಳ ಪ್ರಯೋಜನಕಾರಿಯಾಗಿದ್ದುದರಿಂದ ಅದನ್ನು ತಾಯಿದೇವಿ ಎಂದು ಪೂಜಿಸುತ್ತಿದ್ದರು.

ರಾಸಾಯನಿಕಶಾಸ್ತ್ರದಲ್ಲಿ ಅವರ ಜ್ಞಾನ ಮುಂದು. ಹೆಣಗಳಿಗೆ ಒಂದುಬಗೆಯ ಮಸಾಲೆಯನ್ನು ಸವರಿ ಇಡುವ ಪದ್ಧತಿ ಅವರದು. ಶತಮಾನಗಳಾದರೂ ಕೊಳೆಯದೆ ಇರುವಂತೆ ಇಡುವ ಶಕ್ತಿ ಆ ಮಸಾಲೆಗಿತ್ತು. ಈಗಲೂ ಗೋರಿಗಳಲ್ಲಿ ಪುರಾತನಕಾಲದ ಅಂತಹ ಹೆಣಗಳು ಸಿಕ್ಕಿವೆ. ಅವುಗಳಿಗೆ ಈಜಿಪ್ಟಿನ ಮಮ್ಮಿಗಳೆಂದು ಹೆಸರು.

ಸತ್ತವರೆಲ್ಲ ಮತ್ತೆ ಜೀವಿಸುವರೆಂಬ ನಂಬಿಕೆಯಿಂದ ಹೀಗೆ ಮಾಡಿಟ್ಟಿರಬಹುದು. ಗೋರಿಗಳಲ್ಲಿ ಮಮ್ಮಿಗಳೊಂದಿಗೆ ಬೆಲೆಯಾದ ಆಭರಣಗಳನ್ನೂ, ಆಹಾರವಸ್ತುಗಳನ್ನೂ, ರಕ್ಷಣೆಗೆ ಬೇಕಾದ ಆಯುಧಗಳನ್ನೂ ಇಡಲಾಗಿರುವುದು ಈ ನಂಬಿಕೆಯನ್ನು ಪುಷ್ಟೀಕರಿಸುತ್ತದೆ.

ಹಿಂದೆಯೇ ಹೇಳಿದೆ, ಮಿಶ್ರದೇಶ ವೈಭವದಿಂದದಾಳಿದ್ದ ಸುಮಾರು ೫೦೦೦ ವರ್ಷಗಳ ದೀರ್ಘಕಾಲದಲ್ಲಿ ೩೧ ರಾಜಮನೆತನಗಳು ರಾಜ್ಯವಾಳಿದವೆಂದು. ಸುಮಾರು ಕ್ರಿ. ಪೂ. ೫೦೦೦ ದಿಂದ ೩೩೫೦ ರ ವರೆಗೆ ದೇಶವು ಬಹಳ ಉನ್ನತ ಸ್ಥಿತಿಯಲ್ಲಿತ್ತು. ಈ ಕಾಲದಲ್ಲಿ ೪-೫ ರಾಜಮನೆತನಗಳು ಆಳಿದವು. ಆ ಕಾಲದಲ್ಲಿಯೇ ಪಿರಮಿಡ್‌ಗಳ ನಿರ್ಮಾಣವಾದುದು. ಆಮೇಲೆ ೧೧೫೦ ವರ್ಷಗಳ ಕಾಲ ಆ ದೇಶದಲ್ಲಿ ಒಳಜಗಳಗಳುಂಟಾಗಿ ನೆಮ್ಮದಿ ಕಡಿಮೆಯಾಯಿತು. ಹೀಗಿರುವಾಗ ಏಷಿಯಾದ ದಾಳಿಕಾರರು ಈಜಿಪ್ಟರನ್ನು ಗೆದ್ದು ಹೊಸ ರಾಜಮನೆತನ ಸ್ಥಾಪಿಸಿದರು. ಈ ಗುಲಾಮಗಿರಿಯನ್ನು ಈಜಿಪ್ತರು ಮೂರು ತಲೆಮಾರುಗಳ ಕಾಲ ಅನುಭವಿಸಿದರು. ಆದರೆ ಸುಮಾರು ೧೭೦೦ ರಲ್ಲಿ ಆ ಪರದೇಶೀಯ

ರನ್ನು ಸೋಲಿಸಿ ಓಡಿಸಿ ಮಿಶ್ರದೇಶ ಸ್ವತಂತ್ರವಾಯಿತು. ಅನಂತರ ಈಜಿಪ್ಟ್ ಮತ್ತೆ ವೈಭವಕ್ಕೇರಿತು. ಟಾಟಮಿಸ್, ರಮಿಸಿಸ್ ಮೊದಲಾದ ರಾಜರು ದೊಡ್ಡ ದೊಡ್ಡ ದೇವಾಲಯಗಳನ್ನು ಕಟ್ಟಿಸಿದರು. ನೀರಾವರಿ ಅನುಕೂಲವನ್ನು ಮಾಡಿದರು. ಆ ಕಾಲದಲ್ಲೇ ಸಿರಿಯಾ ಪಾಲಸ್ತೈನ್ ರಾಜ್ಯಗಳು ಈಜಿಪ್ಟಿಗೆ ಸೇರಿ ಸಾಮ್ರಾಜ್ಯ ವಿಸ್ತಾರವಾಯಿತು. ಈ ವೈಭವಯುತ ಸ್ವಾತಂತ್ರ್ಯ ಈಜಿಪ್ತರ ಅದೃಷ್ಟದಲ್ಲಿ ಬಹುಕಾಲ ಇರಲಿಲ್ಲ. ನೀಗ್ರೋಕುಲಕ್ಕೆ ಸೇರಿದ ಪಾಳೆಯಗಾರನೊಬ್ಬ ಅದನ್ನು ಗೆದ್ದು ನೆಲೆಯೂರಿದನು. ಇದಾದುದು ಕ್ರಿ. ಪೂ. ೭೦೦ ರಲ್ಲಿ. ಕೊಂಚ ಕಾಲದಲ್ಲಿ ಬ್ಯಾಬಿಲೋನು, ಆಮೇಲೆ ಇರಾನು, ಈ ದೇಶವನ್ನು ತಮ್ಮ ಆಡಳಿತಕ್ಕೆ ಸೇರಿಸಿಕೊಂಡವು. ಕಡೆಗೆ ಅಲೆಗ್ಸಾಂಡರನು ಮಿಶ್ರದೇಶವನ್ನು ಗೆದ್ದು ಮೆಸಿಡೋನಿಯ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು.

ಈ ದೀರ್ಘಕಾಲದಲ್ಲಿ ಮಿಶ್ರದೇಶ ಹೊಡೆದಾಟ ಹೋರಾಟಗಳ ಹಾವಳಿಗೆ ಸಿಕ್ಕಿದರೂ ಅದರ ಸಂಸ್ಕೃತಿ ಉನ್ನತಿಯನ್ನೈದಿತು. ಆ ದೇಶದ ಧಾರ್ಮಿಕದೃಷ್ಟಿ ಕ್ಲೊಡಕಾದುದಾದರೂ ವಿಶಾಲವಾದುದು. ಒಂದುಬಗೆಯ ಬರೆಯುವ ವಿಧಾನವನ್ನು ಇಂದಿಗೆ ಸುಮಾರು ಐದು ಅಥವಾ ಆರುಸಾವಿರ ವರ್ಷಗಳ ಹಿಂದೆ ಕಂಡುಹಿಡಿದವರಲ್ಲಿ ಈಜಿಪ್ತರು ಮೊದಲಿನವರು. ಅವರು ಚಿತ್ರಕಲೆ, ಶಿಲ್ಪ. ನೌಕಾವಿದ್ಯೆ ಮತ್ತು ಇತರ ಅನೇಕ ವಿಚಿತ್ರ ಕುಶಲ ಕಲೆಗಳನ್ನು ಅಭಿವೃದ್ಧಿಗೊಳಿಸಿದರು. ಗಾಜು ಹಾಗೂ ಎನಾಮಲ್‌ಗಳಲ್ಲಿಯೂ ಅವರು ಪದಾರ್ಥಗಳನ್ನು ತಯಾರು ಮಾಡುತ್ತಿದ್ದರು. ಮತ್ತು ತಾಮ್ರವನ್ನು ಬಳಸಲು ಪ್ರಾರಂಭಿಸಿದ್ದರು. ಹೀಗಾಗಿ ಅವರು ಮನುಷ್ಯನ ದೈನಂದಿನ ಜೀವನದಲ್ಲಿ ಲೋಹಗಳ ಉಪಯೋಗವನ್ನು ಬಳಕೆಗೆ ತಂದರು. ಹೀಗೆ ದೈನಂದಿನ ವಿಷಯಕವಾದ ಪ್ರಾಯೋಗಿಕ ವಸ್ತುಗಳ ಜ್ಞಾನದಲ್ಲಿ ಅಸಾಧಾರಣವಾದ ಅಭಿವೃದ್ಧಿಯನ್ನು ಗಳಿಸಿದ್ದರೂ ಕೂಡ ತಮ್ಮ ನಂಬಿಕೆಗಳಲ್ಲಿ ಅವರು ಇನ್ನೂ ಬಹಳ ಮಟ್ಟಿಗೆ ಹಿಂದುಳಿದಿದ್ದರು. ಮೆಸಪೊಟೋಮಿಯಾ ಮತ್ತು ಒಟ್ಟಿನಲ್ಲಿ

ಪಶ್ಚಿಮ ಏಷಿಯದ ಜನಾಂಗಗಳಲ್ಲಿಯೂ ಜನಗಳ ಸ್ಥಿತಿ ಇದೇ ರೀತಿಯಾಗಿತ್ತು. ಈಗಲೂ ಆ ನಂಬಿಕೆಯಿಂದ ಮಾನವನು ಸಂಪೂರ್ಣ ಮುಕ್ತನಾಗಿಲ್ಲ.

## ಕ್ರೀಟ್ ದ್ವೀಪ

ಮಿಶ್ರದೇಶದ ಸಂಸ್ಕೃತಿ ಉನ್ನತಸ್ಥಿತಿಯಲ್ಲಿದ್ದ ಕಾಲದಲ್ಲೇ ಈ ಸಂಸ್ಕೃತಿಗಿಂತಲೂ ಉತ್ತಮವಾದ ಸಂಸ್ಕೃತಿ ಕ್ರೀಟ್ ದ್ವೀಪದಲ್ಲಿತ್ತು.



ನಾಸಸ್‌ನಲ್ಲಿದ್ದ ಉಗ್ರಾಣ ಒಂದು

ಈ ಸಣ್ಣ ದ್ವೀಪ ಭೂಮಧ್ಯ ಸಮುದ್ರದ ಮಧ್ಯದಲ್ಲಿದೆ. ಕ್ರಿ. ಪೂ. ೪೦೦೦ ವರ್ಷಗಳಷ್ಟರ ಹೊತ್ತಿಗಾಗಲೆ ಕ್ರೀಟ್ ಜನರು ನುರಿತ ನಾವಿಕರಾಗಿದ್ದರು. ಜೊತೆಗೆ ವಾಣಿಜ್ಯ ಮಾರ್ಗದಲ್ಲಿ ಬಹಳ ಅನುಭವಿಗಳಾಗಿದ್ದರು. ಆ ದೇಶದ ಸಂಸ್ಕೃತಿ ಶಾಂತ ಸನ್ನಿವೇಶದಲ್ಲಿ ಅಭಿವೃದ್ಧಿಶಿಖರವನ್ನೈದಿತು. ಚಿತ್ರಕಲೆ ಶಿಲ್ಪಕಲೆಗಳಲ್ಲಿ ಆ ದೇಶದ ಜನರು ನಿಪುಣರಾಗಿದ್ದರು. ಕುಂಬಾರಿಕೆ, ನೆಯ್ಗೆ, ಕೆತ್ತನೆ ಕೆಲಸಗಳಲ್ಲೂ, ರತ್ನದ ಕೆಲಸ, ದಂತದ ಕೆತ್ತನೆ

ಮೊದಲಾದ ನಾಜೂಕು ಕೆಲಸಗಳಲ್ಲಿಯೂ, ಲೋಹದ ಕೆಲಸಗಳಲ್ಲಿಯೂ ಪ್ರವೀಣರಾಗಿದ್ದರು. ಈ ಕೆಲಸಗಳು ಆ ಕಾಲದ ಜನರ ಕೆಲಸಗಳಿಗಿಂತಲೂ ಕಡಮೆದರ್ಜೆಯವಾಗಿರಲಿಲ್ಲ.



ಕ್ರೀಟ್‌ನ ರಾಜಧಾನಿ ನಾಸಸ್‌ನಲ್ಲಿದ್ದ ಒಂದು ಭವನದ ಹಜಾರ

ಆ ದೇಶದಲ್ಲಿ ಆಳಿದ ಮಿನಾಯನ್ ರಾಜರೂ, ಶ್ರೀಮಂತರೂ ಅರಮನೆಗಳನ್ನೂ ಭವ್ಯಮಂದಿರಗಳನ್ನೂ ಕಟ್ಟಿದರು. ಇವುಗಳ ಅವಶೇಷಗಳು ರಾಜಧಾನಿಯಾಗಿದ್ದ ನಾಸಸ್ ಎಂಬಲ್ಲಿ ಸಿಕ್ಕಿವೆ. ಈಚೀಚಿಗೆ ಎಚ್ಚರಿಕೆಯಿಂದ ಅಗೆದು ಅವುಗಳನ್ನು ಬಿಡಿಸಲಾಗಿದೆ. ಅವು ನೆನ್ನೆ ಮೊನ್ನೆಯವರು ನಿರ್ಮಿಸಿರಬೇಕೆನ್ನುವಷ್ಟರಮಟ್ಟಿಗೆ ಅದ್ಭುತವಾಗಿವೆ. ಆ ಭವನಗಳು, ಅಲ್ಲಿನ ಸಂಸ್ಕೃತಿ ವೈಭವ ಮೇಲ್ಮಟ್ಟವನ್ನೇರಿತ್ತೆಂಬುದಕ್ಕೆ ಕುರುಹಾಗಿ ಕಾಣುತ್ತವೆ. ಅವುಗಳಲ್ಲಿ ಉತ್ತಮದರ್ಜೆಯ ನೀರಿನ ಕೊಳಾಯಿಗಳು, ಸ್ನಾನ ಗೃಹಗಳು, ಉಪ್ಪರಿಗೆಗಳು ಇನ್ನೂ ಏನೇನು ಅನುಕೂಲಗಳನ್ನು ಮನುಷ್ಯನು ಬಯಸಬಹುದೋ ಆ ಅನುಕೂಲಗಳೆಲ್ಲ

ಇದ್ದವು. ಆ ಕಾಲದಲ್ಲಿ ಮತ್ತೆಲ್ಲಿಯೂ ಸಿಕ್ಕದಿದ್ದಂತಹ ಅನುಕೂಲ, ಸುಖ ಅಲ್ಲಿನ ಜನರಿಗೆ ಲಭಿಸಿತ್ತು. ಈ ಸಂಸ್ಕೃತಿ ೪-೫ ಸಾವಿರ ವರುಷ ಸುಗಮವಾಗಿ ನಡೆಯಿತು. ಕ್ರಿ. ಪೂ. ೧೦೦೦ ವರ್ಷದ ಸುಮಾರಿನಲ್ಲಿ ಕ್ರೀಟ್ ಸಾಮ್ರಾಜ್ಯವನ್ನು ಆರ್ಯಕುಲಕ್ಕೆ ಸೇರಿದ ಹೆಲನರು ಗೆದ್ದು ಹಾಳು ಮಾಡಿದರು.

## ಮೆಸಪೊಟೋಮಿಯಾ

ಈಗ ಇದನ್ನು ಇರಾಕ್ ಎಂದು ಕರೆಯುತ್ತಾರೆ. ಗೋಧಿ ಸಮೃದ್ಧ ವಾಗಿ ಬೆಳೆಯುತ್ತಿದ್ದ ಈ ಪ್ರಾಂತದಲ್ಲಿ ಪ್ರಪಂಚದ ಮೊದಲನೆಯ ಪಟ್ಟಣ ಗಳು ರಚನೆಯಾದವು. ನೀರಾವರಿ ಕಾಲುವೆಗಳು ತಯಾರಾದುವು. ವ್ಯವಸಾಯ ಸಮೃದ್ಧಿಯಾಗಿ ಅಭಿವೃದ್ಧಿ ಹೊಂದಿತು. ದೊಡ್ಡ ದೇವಸ್ಥಾನ ಗಳು ನಿರ್ಮಿತವಾದವು. ಸಂಸ್ಕೃತಿಯ ದೊಡ್ಡ ಮಟ್ಟವೊಂದನ್ನು ಸಾಧಿಸ ಲಾಗಿತ್ತು. ಕೊನೆಗೆ ಮೆಸಪೊಟೋಮಿಯಾನೆಲ್ಲವನ್ನೂ ವ್ಯಾಪಿಸಿಕೊಂಡು



ಇದು ಒಂದು ಯುದ್ಧ ಚಿತ್ರಪಟ

ದೊಡ್ಡ ಸಾಮ್ರಾಜ್ಯವೊಂದು ಸ್ಥಾಪಿತವಾಯಿತು. ಇದನ್ನು ಸುಮೇರಿ ಯನ್ ಸಾಮ್ರಾಜ್ಯವೆಂದು ಕರೆಯುತ್ತಾರೆ. ಇದು ಕ್ರಿ. ಪೂ. ೬೦೦೦ ದಿಂದ ೫೦೦೦ ದ ವರೆಗಿನ ಕಾಲದಲ್ಲಿ ಯಾವುದೋ ಒಂದು ಅವಧಿಯಲ್ಲಿ ಅಭಿವೃದ್ಧಿ ಸ್ಥಿತಿಯಲ್ಲಿತ್ತು. ಬರವಣಿಗೆಯನ್ನಭಿವೃದ್ಧಿಗೊಳಿಸಿದವರಲ್ಲಿ ಸುಮೇರಿಯನರೇ ಮೊದಲಿಗರೆಂದು ಕಾಣುತ್ತದೆ. ಬಹಳ ದಿನಗಳವರೆಗೆ

ಈ ಬರಹ ಬಹಳ ಒರಟು ರೀತಿಯದು ಆಗಿತ್ತು. ಕಾಲಕ್ರಮದಲ್ಲಿ ಈ ಸುಮೇರಿಯನ್ ಸಾಮ್ರಾಜ್ಯವನ್ನು ಮೇಲೆ ಮೇಲೆ ಪ್ರವಾಹ ರೂಪದಲ್ಲಿ ಬಂದು ವಲಸೆ ಹೊರಟ ಸೆಮೆಟಿಕ್ ಜನರು ಗೆದ್ದುಬಿಟ್ಟರು. ಇವರಲ್ಲಿ ಮೊದಲನೆಯ ಧಾಳಿಗಾರರನ್ನು ಅಕ್ಕಡಿಯನರೆಂದು ಹೇಳುತ್ತಾರೆ.



ಒಂದು ದೇವಸ್ಥಾನ

ಕಾಲಕ್ರಮದಲ್ಲಿ ಅಕ್ಕಡಿಯನರನ್ನು ಮೆಟ್ಟಿ ಅಸ್ಸಿರಿಯನರೂ, ಅವರ ಅನಂತರ ಚಾಲ್ಡಿಯನರೂ ಬಂದರು. ಈ ಧಾಳಿಗಾರರು ತಮ್ಮದೇ ಆದ ದೊಡ್ಡ ಸಾಮ್ರಾಜ್ಯಗಳನ್ನು ಕಟ್ಟಿದರು. ದೊಡ್ಡ ಸೈನ್ಯಗಳು ಈ ಸಾಮ್ರಾಜ್ಯಗಳಿಗೆ ಬೆಂಬಲವಾಗಿ ನಿಂತು ಅವುಗಳನ್ನು ವಿಸ್ತರಿಸಿದವು. ಮಾನವ ಸಮಾಜದ ಅಭಿವೃದ್ಧಿಯಲ್ಲಿ ಮುಂದುವರಿದ ಮೆಟ್ಟಲೊಂದು ಸಾಧಿಸಲ್ಪಟ್ಟಿತ್ತೆಂಬುದು ಇದರಿಂದ ವ್ಯಕ್ತವಾಗುತ್ತದೆ. ಜನರು ದೊಡ್ಡದಾಗಿ ವಿಸ್ತಾರಗೊಂಡ ಸಮೂಹಗಳಾಗಿ ಒಟ್ಟುಗೂಡಲು ಕಲಿತಿದ್ದರು. ಮೆಸಪೊಟೋಮಿಯಾದಲ್ಲಿ ಆರ್ಯರ ಪೂರ್ವಿಕರು ಕಾಣಿಸಿಕೊಳ್ಳುವುದಕ್ಕೆ ಸಾವಿರಾರು ವರ್ಷಗಳ ಮೊದಲೇ ಬೇಟೆಯಾಡಿಕೊಂಡು ಮತ್ತು ವಲಸೆ ಹೋಗುತ್ತಾ ಜೀವಿಸುತ್ತಿದ್ದ ಜನರು ಸಂಪೂರ್ಣವಾಗಿ ಅದೃಶ್ಯವಾಗಿ ಹೋಗಿದ್ದರು. ಕಟ್ಟಕಡೆಗೆ ಕ್ರಿ. ಪೂ. ೫೩೮ ರಲ್ಲಿ ಈ ಆರ್ಯರು, ಅಂದರೆ

ನ್ಗಾದ್ ಮತ್ತು ಪರ್ಷಿಯನ್‌ರು, ಚಾಲ್ಡಿಯನ್ ಸಾಮ್ರಾಜ್ಯವನ್ನು ಬುಡಮೇಲುಮಾಡಿ ತಮ್ಮದೇ ಆದ ಒಂದು ಸಾಮ್ರಾಜ್ಯವನ್ನು ಅಂದರೆ ಪರ್ಷಿಯನ್ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಸುಮೇರಿಯನ್ ಸಾಮ್ರಾಜ್ಯ ಸ್ಥಾಪನೆಯಿಂದ ಹಿಡಿದು ಆರ್ಯರು ಬರುವುದಕ್ಕೆ ಮುಂಚೆ ಚಾಲ್ಡಿಯನ್ ಸಾಮ್ರಾಜ್ಯವು ನಾಶವಾಗುವವರೆಗಿನ ೫೦೦೦ ವರ್ಷಗಳ ಅವಧಿಯಲ್ಲಿ ಸಮೃದ್ಧವೂ ಹಾಗೂ ಫಲವತ್ತೂ ಆದ ಈ ಪ್ರದೇಶದಲ್ಲಿ ಮೇಲುದರ್ಜೆಯ ಸಂಸ್ಕೃತಿಯು ಸಾಧಿಸಲ್ಪಟ್ಟಿತ್ತು. ಕಬ್ಬಿಣವು ಪ್ರಚಾರಕ್ಕೆ ಬಂದು ಗಾಡಿಗಳಿಗೆ ಕಬ್ಬಿಣದ ಚಕ್ರಗಳನ್ನು ಉಪಯೋಗಿಸುತ್ತಿದ್ದರು. ವ್ಯಾಪಾರವು ವಿಸ್ತಾರವಾಗಿ ಹರಡಿತು. ಸೊಗಸಾದ ನಗರಗಳೂ ಅರಮನೆಗಳೂ ಮನೋಹರವಾದ ಶಿಲ್ಪಕೃತಿಗಳಿಂದ ಅಲಂಕೃತವಾಗಿ ಸ್ಥಾಪಿಸಲ್ಪಟ್ಟವು. ಬರೆಯಲು ತಕ್ಕ ಸಾಮಗ್ರಿಗಳಿಲ್ಲದೆ ಒರಟು ಬಗೆಯ



ಟಗರಿನ ಪ್ರತಿಮೆ. ಇದು ಚಿನ್ನ, ಚಿಪ್ಪು, ಮರ ಮೊದಲಾದ ಸಾಮಾನುಗಳಿಂದ ಮಾಡಲಾಗಿದೆ

ಬರವಣಿಗೆಯ ಅಡಚಣೆಗಳಿದ್ದರೂ ಸ್ವಲ್ಪಮಟ್ಟಿಗೆ ಸಾಹಿತ್ಯವೂ ಸೃಷ್ಟಿಯಾಗಿತ್ತು. ಈ ದೇಶದಲ್ಲೂ ಕಲೆ ಮತ್ತು ಧರ್ಮದ ಬೆಳವಣಿಗೆ ಈಜಿಪ್ಟಿನ ಮಟ್ಟದಲ್ಲಿಯೇ ಇತ್ತು. ಕೃಷಿ, ವ್ಯಾಪಾರ ಇವುಗಳಲ್ಲೂ ಅಷ್ಟೇ. ಇಲ್ಲಿ ಅಂಧಶ್ರದ್ಧೆ, ಮೌಢ್ಯಧರ್ಮ ತುಂಬಿತ್ತು. ಆದರೂ ಪ್ರಪಂಚದ ಹಿತದಲ್ಲಿ ಇದು ಸಲ್ಲಿಸಿದ ಲಿಪಿಶೋಧನೆ ಕಿರಿದಲ್ಲ. ಈಜಿಪ್ಟ್ ಬ್ಯಾಬಿಲೋನ್ ಎರಡೂ ಸ್ವತಂತ್ರರೀತಿಯಲ್ಲಿ ಲಿಪಿಯನ್ನು ಕಂಡುಹಿಡಿದವು. ಮಾತನ್ನು ನಿದರ್ಶಿಸಿ ಲಿಪಿಯಾದುದು ಬಾಬಿಲೋನಿನಲ್ಲೇ ಮೊದಲು. ಈ ಲಿಪಿಯು ಜೇಡಿಮಣ್ಣಿನ ಹಲಗೆಗಳ ಮೇಲೆ ಮರದ ದಸಿಯಿಂದ ಕೆತ್ತಲಾಗುತ್ತಿತ್ತು. ಜನರು ಲೆಕ್ಕಪತ್ರಗಳನ್ನಿಡಲೂ, ರಾಜರು ತಮ್ಮ ಆಜ್ಞಾಪತ್ರಗಳನ್ನು ಕಳುಹಿಸಲೂ, ರಾಜಘೋಷಣೆ ಮಾಡಲೂ ಈ ಲಿಪಿಯೇ ಉಪಯೋಗವಾಗುತ್ತಿತ್ತು.


ಒಂದು ಗೋರಿಯಲ್ಲಿ ಸಿಕ್ಕಿರುವ ತಲೆಯ ಆಭರಣ

ಯೂರೋಪಿನ ಈಗಿನ ಲಿಪಿಗಳಿಗೆ ತಾಯಾದ ಫಿನಿಷಿಯನ್ ಲಿಪಿ, ಈಜಿಪ್ಟಿನ ಮತ್ತು ಬಾಬಿಲೋನಿನ ಲಿಪಿಗಳ ಬೆರಕೆಯಿಂದ ಹುಟ್ಟಿದುದು. ಭಾರತದ ಸರ್ವಲಿಪಿಗಳಿಗೆ ಜನನಿಯಾದ 'ಬ್ರಾಹ್ಮಿ' ಲಿಪಿಯೂ ಕೂಡ ಫಿನೇಷಿಯನ್ ಲಿಪಿಯಿಂದಲೇ ಬಂದಿರಬೇಕು.

## ಫಿನೀಷಿಯನರು

ಕ್ರಿ. ಪೂ. ೧೦೦೦ ವರ್ಷಗಳ ಮೊದಲೇ ನೌಕಾ ವ್ಯಾಪಾರದಲ್ಲಿ ನಿಪುಣರಾದ ಮತ್ತೊಂದು ಜನಾಂಗ ಭೂಮಧ್ಯ ಸಮುದ್ರ ಪ್ರದೇಶದಲ್ಲಿ ಪ್ರಾಬಲ್ಯಕ್ಕೆ ಬಂದಿತ್ತು. ಇವರೇ ಫಿನೀಷಿಯನ್ನರು. ಇವರು ದಕ್ಷಿಣ ಕಕೇಷಿಯನ್ ಕುಲದ ಸೆಮೆಟಿಕ್ ಶಾಖೆಗೆ ಸೇರಿದ್ದರು. ಇವರು ಅರೇಬಿಯಾದಿಂದ ಧಾಳಿ ಬಂದವರು. ಇವರವೃತ್ತಿ ಪಶುಪಾಲನೆ. ಇವರು ವಲಸೆ ಹೊರಟು ಸಿರಿಯದ ತೀರದಲ್ಲಿ ನೆಲಸಿದರು. ಸಿರಿಯ ತೀರದ ಪಟ್ಟಣವಾದ ಡಮಾಸ್ಕಸ್ ಈಗ ಪ್ರಪಂಚದಲ್ಲಿರುವ ಪಟ್ಟಣಗಳಲ್ಲಿ ತುಂಬ ಪುರಾತನವಾದುದು. ಭಾರತದ ಕಾಶಿ, ಪ್ರಯಾಗ ಇವೂ ಪುರಾತನ ಪಟ್ಟಣಗಳೆಂದು ಹೇಳುತ್ತಾರೆ. ಫಿನೀಷಿಯನರ ಬಹಳ ಮುಖ್ಯವಾದ ಪಟ್ಟಣ ಟೈರ್ ಎಂಬುದು. ಇದು ಸಮುದ್ರಾಂತರಗಳ ಮೇಲಿನ ವ್ಯಾಪಾರದಲ್ಲಿ ಬಹಳ ಮುಖ್ಯವಾದ ಕೇಂದ್ರವಾಗಿ ಅಭಿವೃದ್ಧಿಗೊಂಡಿತು. ಏಕೆಂದರೆ, ಫಿನೀಷಿಯನರು ಉತ್ತಮ ವ್ಯಾಪಾರಿಗಳೂ ನಾವಿಕರೂ ಆಗಿದ್ದರು. ಅವರು ಭೂಮಧ್ಯ ಸಮುದ್ರದ ದಡಗಳ ಮೇಲೆ ಅನೇಕ ವ್ಯಾಪಾರದ ಬಿಡದಿಗಳನ್ನು ಸ್ಥಾಪಿಸಿದುದಲ್ಲದೆ ಜಿಬ್ರಾಲ್ಟರ್ ಜಲಸಂಧಿಯನ್ನು ದಾಟ ಹೋಗಿದ್ದರು. ಈ ವ್ಯಾಪಾರದ ಬಿಡದಿಗಳಲ್ಲಿ ಕೆಲವು ಮುಖ್ಯವಾದ



ರಾಜ್ಯಗಳು ಅಭಿವೃದ್ಧಿಗೊಂಡವು. ಇವುಗಳಲ್ಲಿ ಮುಖ್ಯವಾದ್ದು ಕಾರ್ಥೇಜಿನ ಫಿನೀಷಿಯನ್ ದ್ವೀಪ. ಇದು ಕ್ರಿ.ಪೂ. ೫೦೦ ರ ಸುಮಾರಿಗೆ ಒಂದು ದೊಡ್ಡ ನೌಕಾಕೇಂದ್ರವಾಗಿತ್ತು. ಇದರ ಮೂಲಕ ಹಡಗುಗಳು ಆಫ್ರಿಕದ ದಕ್ಷಿಣದ ತೀರ ಸೇರಿ ಬಹಳ ದೂರ ಉತ್ತರದಿಕ್ಕಿನಲ್ಲಿ ಇಂಗ್ಲೆಂಡಿನವರೆಗೂ ವ್ಯಾಪಾರ ನಡೆಸಿದವು. ಕಾರ್ಥೇಜು ಒಂದು ದೊಡ್ಡ ಕೈಗಾರಿಕಾ ಕೇಂದ್ರವೂ ಆಗಿತ್ತು. ಅಲ್ಲಿ ತಯಾರಾದ ಪದಾರ್ಥಗಳು ದಿನದಿನಕ್ಕೂ ವೃದ್ಧಿ ಹೊಂದಿದವು. ಇವುಗಳಲ್ಲಿ ನೂಲಿನಿಂದ ತಯಾರಾದ ವಸ್ತುಗಳು ಹೆಚ್ಚು. ಇವರು ಸ್ಪೈನಿನಲ್ಲಿ ಗಣಿಗಳ ಕೆಲಸವನ್ನೂ ನಡೆಸಿದರು. ಮಧ್ಯ ಆಫ್ರಿಕದ ನೀಗ್ರೋ ಜನರೊಂದಿಗೆ ಸಹರಾ ಮರುಭೂಮಿಯ ಮೂಲಕವೂ ವ್ಯಾಪಾರ ನಡೆಸಿದರು. ಸೂಯಸ್‌ನಿಂದ ಪ್ರಾರಂಭಿಸಿ ಫಿನೀಷಿಯನ್ ನಾವಿಕರು ಒಂದು ಸಲ ಆಫ್ರಿಕವನ್ನೂ ಸುತ್ತುಹಾಕಿದರೆಂದು ಹೇಳುತ್ತಾರೆ. ಇಂಡಿಯಾ ಸಿಲೋನ್‌ಗಳೊಡನೆಯೂ ವ್ಯಾಪಾರವನ್ನಾರಂಭಿಸಿದ್ದರು.



ಈ ಫಿನೀಷಿಯನರಿಗೆ ನಾವು ಬಹಳ ಉತ್ತಮವೂ ಅನರ್ಘ್ಯವೂ ಆದ ಸಂಶೋಧನೆಯನ್ನು ಮಾಡಿದ್ದಕ್ಕೆ ಗೌರವ ಕೊಡಬೇಕು. ಈ ಸಂಶೋಧನೆ ಬರಹದಲ್ಲಿ ವರ್ಣಮಾಲೆಯನ್ನು ಕಂಡುಹಿಡಿದುದು. ಇದು ಪ್ರಾಚೀನ ತರದ ಬರಹಗಳಲ್ಲಿದ್ದಂತೆ ವಸ್ತುಗಳ ಅಥವಾ ಅಭಿಪ್ರಾಯಗಳ ಚಿತ್ರಗಳಲ್ಲ.

ಸ್ವಾಭಾವಿಕವಾದ ಮಾತಿನಲ್ಲಿ ಉಪಯೋಗಿಸುವ ಶಬ್ದಗಳನ್ನು ಬರೆಯಲು ಅನುಕೂಲವಾಗುವಂತಹ ಗುರುತುಗಳು.

## ಯಹೂದ್ಯರು

ಫಿನೀಷಿಯನರಿಗೆ ಹತ್ತಿರದ ಸಂಬಂಧವಿದ್ದ ಇನ್ನೊಂದು ಗುಂಪಿನ ಜನರಿದ್ದರು. ಇವರೇ ಯಹೂದ್ಯರು. ಇವರೂ ಮೊದಲು ಅರೇಬಿಯದ ವಲಸೆಗಾರರಾಗಿದ್ದರು. ಅಲ್ಲಿಂದ ಅವರು ಮತ್ತೆ ವಲಸೆ ಹೊರಟು ಮೊದಲು ಮೆಸೊಪೊಟೋಮಿಯಾಕ್ಕೂ ಅನಂತರ ಈಜಿಪ್ಟಿಗೂ ಹೋಗಿ ಕೊನೆಗೆ ಪ್ಯಾಲೆಸ್ಟೈನಿನಲ್ಲಿ ಕ್ರಿ. ಪೂ. ಸುಮಾರು ೧೨೦೦ ರಲ್ಲಿ ನೆಲಸಿದರು. ಈ ಯಹೂದಿಗಳು ಸಂಖ್ಯೆಯಲ್ಲಿ ಬಹಳ ಕಮ್ಮಿ. ಅವರ ಜೀವಮಾನದಲ್ಲಿ ಅನೇಕ ತೊಂದರೆಗಳನ್ನೆದುರಿಸಬೇಕಾದ್ದು ಅವರ ಅದೃಷ್ಟ. ಈಗಲೂ ಅವರು ತೊಂದರೆಯಿಂದ ಮುಕ್ತರಾಗಲಿಲ್ಲ. ಆಗ ಅಕ್ಕಪಕ್ಕಗಳಲ್ಲಿದ್ದ ಈಜಿಪ್ಟ್ ಮೆಸೊಪೊಟೋಮಿಯಾಗಳು ಅವರನ್ನು ಮತ್ತೆ ಮತ್ತೆ ಗೆಲ್ಲುತ್ತಿದ್ದರು. ಇವೆರಡು ದೊಡ್ಡ ಮತ್ತು ಬಲಶಾಲಿ ಸಾಮ್ರಾಜ್ಯಗಳ ನಡುವೆ ಸೇರಿಕೊಂಡು ಯಹೂದಿ ರಾಜ್ಯ ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ಬಹಳ ಸ್ವಲ್ಪಕಾಲ ಅದೂ ಕ್ರಿ. ಪೂ. ಒಂಬತ್ತನೇ ಶತಮಾನದಲ್ಲಿ ಯಹೂದಿಗಳು



ಸೈನಿಕಬಲ ಮತ್ತು ಐಹಿಕ ದೊಡ್ಡಸ್ತಿಕೆ ಎಂಬುವುಗಳನ್ನು ಸಾಧಿಸಿದರು. ಇದು ಬಹಳ ದರ್ಪದಿಂದ ಆಳಿದ ಡೇವಿಡ್ ಮತ್ತು ಸಾಲೊಮನ್ ರಾಜರ ಆಡಳಿತದ ಕಾಲದಲ್ಲಿ ನಡೆದುದು. ಹಿರಿಮೆಯ ಈ ಚಿಕ್ಕ ಅವಧಿಯು ಕಳೆದ ಅನಂತರದಲ್ಲಿ ಯಹೂದಿ ಸಾಮ್ರಾಜ್ಯವು ಎರಡಾಗಿ ಒಡೆದು ಹೋಯಿತು. ಇದಾದನಂತರ ಅಸ್ಸಿರಿಯ ಹಾಗೂ ಚಾಲ್ಡಿಯಗಳು ಇದನ್ನು ಬಹಳ ಸುಲಭವಾಗಿ ಅದುಮಿಬಿಟ್ಟವು. ಜನಗಳು ದಾಸರಾದರು. ಮೆಸೊಪೊಟೋಮಿಯಾಕ್ಕೂ ಅಲ್ಲಿಂದ ಇನ್ನೂ ಆಚೆಗೂ ಸೆರೆಯಾಳುಗಳಾಗಿ ಹೋಗಬೇಕಾಯಿತು.



ಆಮೇಲಾಮೇಲೆ ದೊಡ್ಡ ದೊಡ್ಡ ಸಾಮ್ರಾಜ್ಯಗಳ ಹಿಡಿತಕ್ಕೆ ಸಿಕ್ಕಿ ಬಲಹೀನವಾಗಿದ್ದರೂ ಯಹೂದಿ ಜನರ ನಾಗರಿಕತೆ ಬಹಳ ಮೇಲಾದುದು. ಅದು ಐಹಿಕ ಸೌಖ್ಯದ ದೃಷ್ಟಿಯಿಂದಲ್ಲ, ನೈತಿಕ ದೃಷ್ಟಿಯಿಂದ. ಈ ಚಿಕ್ಕ ಜನಾಂಗ ತಾನು ಪಡೆದ ನೈತಿಕ ಹಾಗೂ ಧಾರ್ಮಿಕ ಅಭಿಪ್ರಾಯಗಳಿಂದ ಮತ್ತು ಆ ದೊಡ್ಡ ಅಭಿಪ್ರಾಯಗಳನ್ನು ಬೆಳೆಸಿದದೊಡ್ಡ ತತ್ವಜ್ಞರಿಂದ ಇತಿಹಾಸದ ಹೊಗಳಿಕೆಗೆ ಅರ್ಹವಾದುದು.

## ಭರತಭೂಮಿ

ನಾವೀಗ ಭರತಭೂಮಿಯಲ್ಲಿ ಆ ಕಾಲದ ನಾಗರಿಕತೆಯ ವಿಷಯಕ್ಕೆ ಬರೋಣ. ಈಚೀಚೆಯವರೆಗೂ ಇಲ್ಲಿನ ಪ್ರಾಚೀನ ಕಾಲದ ಸಂಸ್ಕೃತಿ ಏನೆಂಬುದನ್ನು ತಿಳಿಯಲು ಆಧಾರ ಸಾಕಾದಷ್ಟಿರಲಿಲ್ಲ. ೧೯೨೫ ರಲ್ಲಿ ಸಿಂಧೂನದಿ ತೀರದಲ್ಲಿ ಮೊಹೆಂಜೊದಾರೊ ಬಳಿ ಭೂ ಶೋಧನೆ ನಡೆಸಿದುದರಿಂದ ಒಂದು ಪುರಾತನ ನಗರವಿದ್ದ ಸ್ಥಳ ಸಿಕ್ಕಿದೆ. ಅದಕ್ಕೆ ಈಶಾನ್ಯದಲ್ಲಿ ೪೫೦ ಮೈಲಿ ದೂರದಲ್ಲಿ ಪಂಜಾಬಿನಲ್ಲಿ ಹರಪ್ಪ ಎಂಬಲ್ಲಿಯೂ ಭೂಗತವಾಗಿದ್ದ ಪಟ್ಟಣ ಒಂದು ಗೊತ್ತಾಗಿದೆ. ಈ ಪಟ್ಟಣಗಳು ಸುಮಾರು ಇಂದಿಗೆ ೫೦೦೦ ವರ್ಷಗಳ ಮೊದಲು ಇದ್ದವೆಂದು ಗೊತ್ತಾಗಿದೆ. ಇದು ಆರ್ಯರು ಭಾರತಕ್ಕೆ ಬರುವುದಕ್ಕೆ ಪೂರ್ವದ ಮಾತು.

## ದ್ರಾವಿಡರು

ಮೊಹೆಂಜೊದಾರದಲ್ಲಿ ಒಂದರ ಅವಶೇಷದ ಮೇಲೆ ಮತ್ತೊಂದು ಹೀಗೆ ಪಟ್ಟಣಗಳು ನಿರ್ಮಾಣವಾಗಿ ಹಾಳಾಗಿವೆ. ಇವುಗಳಲ್ಲಾಗಲೇ ಮೂರನ್ನು ಅಗೆದು ಹೊರಗೆಡವಿದ್ದಾರೆ. ಈಗ ಸಿಕ್ಕಿರುವ ಪಟ್ಟಣ ೧೫ ಚದರಮೈಲಿ ವಿಸ್ತೀರ್ಣವುಳ್ಳದ್ದಾಗಿ ಬೆಳೆದಿದ್ದುದು. ಇಷ್ಟು ದೊಡ್ಡ ಪಟ್ಟಣ ಆ ಕಾಲದಲ್ಲಿರಬೇಕಾಗಿದ್ದರೆ ನಿಜವಾಗಿಯೂ ಆ ರಾಷ್ಟ್ರ ವೈಭವ ಯುತವಾಗಿಯೇ ಇದ್ದಿರಬೇಕು. ಅಷ್ಟೇ ಅಲ್ಲ, ೪೫೦ ಮೈಲಿ ದೂರ ವಿರುವ ಹರಪ್ಪದ ಸಂಸ್ಕೃತಿಯೂ ಮೊಹೆಂಜೊದಾರದ ಸಂಸ್ಕೃತಿಯೇ ಆಗಿರುವುದರಿಂದ ಅದರ ವಲಯ ವಿಸ್ತಾರವಾಗಿಯೇ ಇದ್ದಿರಬೇಕು.

ಆ ರಾಷ್ಟ್ರದಲ್ಲಿ ಕಟ್ಟಡಗಳಿಗೆ ಸುಟ್ಟ ಇಟ್ಟಿಗೆಗಳನ್ನೂ ಗಾರೆಯನ್ನೂ ಉಪಯೋಗಿಸುತ್ತಿದ್ದರು. ಕಟ್ಟಡಗಳು ಭವ್ಯವಾಗಿರುತ್ತಿದ್ದವು. ಅಲ್ಲದೆ ವಾಸಕ್ಕೆ ಅನುಕೂಲವಾದ ಸ್ನಾನಗೃಹಗಳೂ ಅಂದವಾದ ಹಜಾರಗಳೂ ಪಡಸಾಲೆಗಳೂ ಇದ್ದವು. ಪಟ್ಟಣಗಳ ಅನುಕೂಲವಾದ ರಚನೆ ಆ

ರಾಷ್ಟ್ರದವರಿಗೆ ತಿಳಿದಿತ್ತು. ವಿಶಾಲವಾದ ರಾಜಮಾರ್ಗಗಳೂ ಅವಕ್ಕೆ ಬಂದು ಸೇರಲು ಸಣ್ಣಸಣ್ಣ ರಸ್ತೆಗಳೂ ಇದ್ದವು. ರಸ್ತೆಗಳ ಪಕ್ಕಗಳಲ್ಲಿ ಊರು ಚೊಕ್ಕಟವಾಗಿರಲು ಚರಂಡಿಗಳ ಅನುಕೂಲವಿತ್ತು. ಜನರು ಶುಚಿತ್ವದ ಬೆಲೆಯನ್ನು ತಿಳಿದಿದ್ದರು ಮತ್ತು ತಾಮ್ರ, ಹಿತ್ತಾಳೆ ಕಂಚಿನ ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ಬೆಳ್ಳಿ, ಬಂಗಾರ ಮತ್ತು ರತ್ನ ಗಳಲ್ಲಿ ಆಭರಣಗಳನ್ನು ಮಾಡಿ ಉಪಯೋಗಿಸುತ್ತಿದ್ದರು. ನೇಯ್ಗೆಯೂ ಗೊತ್ತಿತ್ತು. ಗೋಧಿ ಅವರ ಮುಖ್ಯ ಆಹಾರವಾಗಿತ್ತು. ಸುಂದರವಾದ ದೇವಸ್ಥಾನಗಳನ್ನು ಕಟ್ಟಿ ಅವುಗಳಲ್ಲಿ ಮೂರ್ತಿಗಳನ್ನು ಪೂಜಿಸುತ್ತಿದ್ದರು. ಸಂಚಾರಕ್ಕೆ ದುಂಡುಗಾಲಿಗಳುಳ್ಳ ರಥಗಳನ್ನು ಉಪಯೋಗಿಸುತ್ತಿದ್ದರು. ಒಂದುಬಗೆಯ ಲಿಪಿ ಕೂಡ ಬಳಕೆಯಲ್ಲಿತ್ತು. ಈಗ ಯೂರೋಪಿನಲ್ಲೆಲ್ಲ ಸಂಖ್ಯೆಗಳಿಗೆ ಆಧಾರವಾದ ಅರೇಬಿಯದ ಸಂಖ್ಯಾಕ್ರಮ ದ್ರಾವಿಡರದೇ ಎಂದು ನಂಬಿಕೆ ಇದೆ. ಅರೇಬಿಯಾದವರು ಇವರಿಂದ ಅದನ್ನು ಕಲಿತರು. ಅವರಿಂದ ಯೂರೋಪಿಯನರು ಕಲಿತರು.

ಆ ರಾಷ್ಟ್ರ ತನ್ನ ಸಮಕಾಲೀನವಾದ ಮಿಶ್ರ, ಸುಮೇರಿಯಾ, ಚೀನ ದೇಶಗಳೊಡನೆ ವ್ಯಾಪಾರ ವ್ಯವಹಾರ ನಡೆಸುತ್ತಿತ್ತೆಂದು ಅಲ್ಲಿ ಸಿಕ್ಕಿರುವ ನಾಣ್ಯವನ್ನು ಹೋಲುವ ಲೋಹದ ತುಂಡುಗಳಿಂದ ಊಹಿಸಬಹುದು. ಇವರಿಗೆ ಹಡಗು ವ್ಯಾಪಾರ ಮುಖ್ಯವಾಗಿತ್ತು.

ಭಾರತದ ಈ ಸಂಸ್ಕೃತಿ ಸಿಂಧೂ ಸಂಸ್ಕೃತಿಯೆಂದೂ, ದ್ರಾವಿಡ ಸಂಸ್ಕೃತಿಯೆಂದೂ ನಿರ್ಧರವಾಗಿದೆ. ಆಗ ಈ ದೇಶದಲ್ಲಿ ಇಷ್ಟು ವೈಭವ ದಿಂದ ಬಾಳಿದ ದ್ರಾವಿಡರು ಈ ದೇಶಕ್ಕೆ ಬೇರೆ ಕಡೆಯಿಂದ ವಲಸೆ ಬಂದಿರಬೇಕೆಂಬ ಊಹೆ ಇದೆ. ಆದರೆ ಅದು ನಿಖರವಾಗಿ ಗೊತ್ತಾಗಿಲ್ಲ.

## ಆರ್ಯರು

ಕ್ರಿ. ಪೂ. ೩೦೦೦ ವರ್ಷಗಳ ಸುಮಾರಿನಲ್ಲಿ ಆರ್ಯರು ಭಾರತಕ್ಕೆ ವಲಸೆ ಬಂದರು. ಇವರು ಎಲ್ಲಿಂದ ಬಂದರು, ಇವರ ಹುಟ್ಟುದೇಶ

ಯಾವುದು ಎಂಬುದು ಇನ್ನೂ ಅತ್ತಿಂದಿತ್ತ ಹಾರಾಡುತ್ತಿದೆ. ಕೆಲವರ ಅಭಿಪ್ರಾಯದಲ್ಲಿ ಭಾರತದ ಉತ್ತರದಲ್ಲಿ ಅಂದರೆ ಕಾಶ್ಮೀರದಲ್ಲಿಯೋ



ಅಥವಾ ಇನ್ನೂ ಉತ್ತರಕ್ಕೆ ಹಿಮಾಲಯದ ತಪ್ಪಲಿನ ಪ್ರದೇಶವೋ ಇವರ ತವರಾಗಿತ್ತೆಂದೂ ಅಲ್ಲಿಂದಲೇ ಅವರು ಏಷಿಯಾ ಮತ್ತು ಯೂರೋಪುಗಳಿಗೆ ಹರಡಿದರೆಂದೂ, ಇವರು ಕ್ಯಾಸ್ಪಿಯನ್ ಸಮುದ್ರದ ಪಕ್ಕದ ಮಧ್ಯ ಏಷ್ಯದ ಪ್ರದೇಶದಿಂದ ವಲಸೆ ಹೊರಟು ಯೂರೋಪು ಏಷ್ಯಗಳ ಪ್ರಾಂತಗಳಲ್ಲಿ ಹರಡಿಕೊಂಡರೆಂದು ಇನ್ನು ಕೆಲವರೂ ಹೇಳುತ್ತಾರೆ. ಅವರೆಲ್ಲಿಂದಾದರೂ ಬರಲಿ, ಅವರ ವಿಷಯ ತಿಳಿಯುವುದು ಸ್ವಾರಸ್ಯವಾದುದು.

ಆರ್ಯರು ತಮ್ಮ ತವರು ಪ್ರದೇಶದಲ್ಲಿ ಜೀವನೋಪಾಯಕ್ಕೆ ಅನುಕೂಲ ಕಡಮೆಯಾಗಲು ಅಲ್ಲಿಂದ ದಿಕ್ಕುದಿಕ್ಕಿಗೆ ವಲಸೆ ಹೊರಟರು. ತಾವು ಹೋದೆಡೆಯಲ್ಲೆಲ್ಲ ಅಲ್ಲಿನ ಪೂರ್ವನಿವಾಸಿಗಳನ್ನು ಮೆಟ್ಟಿ ಭರದಿಂದ ಮುಂದುವರಿದರು. ಪಶ್ಚಿಮದಲ್ಲಿ ಮುಂದುವರಿಯುತ್ತಿದ್ದ ಈ ಜನರಿಗೆ 'ಕೆಲ್ಟ್ಸ್' ಜನರೆಂದು ಹೆಸರು. ಇವರು ಕೊನೆಗೆ ಅಟ್ಲಾಂಟಿಕ್ ಸಾಗರವನ್ನು ಸೇರಿದರು. ಹೀಗೆ ಮುಂದುವರಿಯುತ್ತಾ ಇವರು ತಾವು ಗೆದ್ದ

ಜನರನ್ನು ಅತಿ ಪಶ್ಚಿಮ ಪ್ರದೇಶಗಳಾದ ಇಂಗ್ಲೆಂಡ್, ಫ್ರಾನ್ಸ್ ಮತ್ತು ಸ್ಪೈಯಿನ್ ಪರ್ಯಾಯದ್ವೀಪಗಳಿಗೆ ತಳ್ಳಿಬಿಟ್ಟರು. ಹಾಗೆಯೇ ಆರ್ಯ ಕುಲದವರು ಬೇರೆ ಬೇರೆ ಹೆಸರುಗಳಿಂದ ಪರ್ಷಿಯಾ ಇಂಡಿಯಾ, ಇಟಲಿ, ಗ್ರೀಸ್ ಈ ಪ್ರದೇಶಗಳೊಳಕ್ಕೆ ನುಗ್ಗಿದರು. ಇವರು ತಮ್ಮ



ಮನೆಯ ಸಾಮಾನುಗಳನ್ನು ಗಾಡಿಗಳಲ್ಲಿ ಹಾಕಿಕೊಂಡು ಎತ್ತುಗಳಿಂದ ಎಳೆಸಿಕೊಂಡು ಬಂದರು. ಇವರ ಆಸ್ತಿ ಎಂದರೆ ಗೋವು. ದನಕರುಗಳೇ ಸರ್ವಸ್ವ. ಅವುಗಳ ವಿನಿಮಯದಿಂದಲೇ ಬೇಕಾದ ಸಾಮಾನುಗಳನ್ನು ಪಡೆಯುತ್ತಿದ್ದರು. ಮುಂದುವರಿಯುತ್ತಿದ್ದ ಈ ಆರ್ಯರು ದೊಡ್ಡನದಿಗಳು ಮತ್ತು ಸಮುದ್ರದ ದಡಗಳ ಕಡೆ ಬಂದಾಗ ಅವುಗಳನ್ನು ದಾಟಲು ದೋಣಿಗಳನ್ನು ಕಟ್ಟಿಕೊಂಡರು. ಅವರು ಮರಗಳಲ್ಲಿ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ಸತ್ತವರನ್ನು ಸುಡುತ್ತಿದ್ದರು. ಕಾಲ

ಕ್ರಮದಲ್ಲಿ ಪಶ್ಚಿಮ ಮತ್ತು ಉತ್ತರಗಳಲ್ಲಿ ಅವರು ಬೇಸಾಯ ಮಾಡುತ್ತಾ ಒಂದುಕಡೆ ನೆಲೆಯಾಗಿ ನಿಂತರು. ಶತಮಾನಗಳ ಕಾಲ, ಹಬ್ಬಗಳಲ್ಲಿಯೂ ಧಾರ್ಮಿಕ ಉತ್ಸವಗಳಲ್ಲಿಯೂ ಹಾಡುತ್ತಿದ್ದ ಹಳೆಯ ಹಾಡುಗಳನ್ನು ಅವರು ತಾವು ಹೋದಲ್ಲೆಲ್ಲ ಹಾಡಿದರು. ಹೀಗಾಗಿಯೇ ಪರ್ಷಿಯದಲ್ಲಿ 'ಸೆಂಡವೆಸ್ತ' ವೂ, ಇಂಡಿಯಾದಲ್ಲಿ 'ವೇದ' ಗಳೂ, ಗ್ರೀಸ್‌ನಲ್ಲಿ 'ಪುರಾಣ' ಗಳೂ ಹುಟ್ಟಿದುದು.

ಹೀಗೆ ಆರ್ಯರು ತಮ್ಮೊಂದಿಗೆ ಸಾಹಿತ್ಯ, ಚರಿತ್ರೆ ಮತ್ತು ವೇದಾಂತ ಇವುಗಳ ಮೊದಲಿನ ಭಾಗಗಳನ್ನು ತಂದರು. ತರುಣ ಪುರೋಹಿತ ಅಥವಾ ಹಾಡುಗಾರರು ಎಲ್ಲವನ್ನೂ ಎಚ್ಚರಿಕೆಯಿಂದ ಬಾಯಿಪಾಠ ಮಾಡುತ್ತಿದ್ದರು. ಹೀಗೆಯೇ ಒಬ್ಬರಿಂದ ಒಬ್ಬರು ಬಾಯಿಪಾಠ ಮಾಡುತ್ತಿದ್ದರು. ಈ ಪ್ರಾಚೀನ ಆರ್ಯರು ಒಂದೊಂದೇ ಮನೆಯಾಗಿ ವಿಭಾಗವಾಗಿದ್ದರು. ಆದರೆ ಪ್ರತಿಯೊಂದು ಮನೆಯೂ ದೊಡ್ಡ ಅವಿಭಕ್ತ ಕುಟುಂಬವಾಗಿತ್ತು. ಕೆಲವುವೇಳೆ ಒಂದೊಂದರಲ್ಲಿ ನೂರಾರು ವ್ಯಕ್ತಿಗಳು ಇರುತ್ತಿದ್ದರು. ಅಂತಹ ಕುಟುಂಬಗಳು ಸೇರಿ ಗುಂಪುಗಳಾಗಿದ್ದವು. ಒಂದೊಂದು ಗುಂಪಿಗೂ ಒಬ್ಬೊಬ್ಬ ನಾಯಕನಿದ್ದನು. ಈ ಗುಂಪುಗಳು ಅನೇಕವೇಳೆ ಒಂದರೊಡನೊಂದು ಯುದ್ಧಮಾಡುತ್ತಿದ್ದವು. ಆರ್ಯರು ತಮ್ಮ ಹೊಸ ಮನೆಗಳಲ್ಲಿ ನೆಲಸಿದ ಹಾಗೆಲ್ಲ ಪ್ರತಿಯೊಂದು ಗುಂಪೂ ದೇಶದಲ್ಲಿ ಒಂದು ಗೊತ್ತಾದ ಭಾಗದಲ್ಲಿ ವಾಸಮಾಡಲು ಪ್ರಾರಂಭಮಾಡಿತು. ಆ ದೊಡ್ಡಗುಂಪಿನಲ್ಲಿದ್ದ ಸಣ್ಣಸಣ್ಣ ವರ್ಗಗಳು ಹಳ್ಳಿಗಳಲ್ಲಿ ನೆಲಸುತ್ತಾ ಹೋದವು.

ಆರ್ಯರು ಭಾರತಭೂಮಿಯ ಪಂಜಾಬು ಪ್ರಾಂತದಲ್ಲಿ ಕಾಲಿಟ್ಟರು. ಆಗ ದ್ರಾವಿಡರು ಸಂಸ್ಕೃತರಾಗಿ ರಾಷ್ಟ್ರಗಳನ್ನು ಕಟ್ಟಿದ್ದರು. ಈ ರಾಷ್ಟ್ರಗಳು ಈಗಿನ ಪಂಜಾಬು, ಸಿಂಧೂ ಪ್ರಾಂತವನ್ನೆಲ್ಲ ಆಕ್ರಮಿಸಿತ್ತು. ಅಷ್ಟೇ ಅಲ್ಲ, ಯಮುನಾ ಗಂಗಾ ಮೈದಾನದಲ್ಲಿ ಹರಡಿತ್ತೆಂದು

ಕಾಣುತ್ತದೆ. ಇದನ್ನೆಲ್ಲ ಹಿಂದೆ ತಿಳಿಸಿದೆ. ಆರ್ಯರು ಕದನಕಲಿಗಳು, ಸಾಹಸಿಗಳು. ಆಗಲೆ ಅವರು ನುರಿತ ವ್ಯವಸಾಯಗಾರರೂ ಆಗಿದ್ದರು. ಇವರಿಗೆ ಸರ್ವಸ್ವವಾಗಿದ್ದ ಗೋವನ್ನು ಬಹಳವಾಗಿ ಗೌರವಿಸುತ್ತಿದ್ದರು. ಈ ಭಾವನೆಯೇ ಕೊನೆಗೆ ಗೋವುಗಳಲ್ಲಿ ಪೂಜ್ಯಭಾವನೆ ಬರಲು ಕಾರಣ. ಭೌತಿಕ ಶಾಸ್ತ್ರದಲ್ಲೂ ಅವರಿಗೆ ತಿಳಿವಿತ್ತು. ರಸಿಕರು. ಯಾವಾಗಲೂ ಆನಂದದಿಂದ ಹಾಡಿ ಕುಣಿದು ಜೀವನದ ಹೊರೆಯನ್ನು ಹಗುರವಾಗಿ ಕಾಣುವ ಸ್ವಭಾವವನ್ನು ಬೆಳಸಿಕೊಂಡಿದ್ದರು. ತಮ್ಮ ಜನಾಂಗದ ವಿಷಯದಲ್ಲಿ ಅವರಿಗೆ ತುಂಬ ಹೆಮ್ಮೆ. ಆದಕ್ಕಾಗಿಯೇ ತಮ್ಮನ್ನು ಆರ್ಯರೆಂದು ಕರೆದುಕೊಳ್ಳುತ್ತಿದ್ದರು. ಆರ್ಯ ಎಂದರೆ ಪೂಜ್ಯ, ಸಂಭಾವಿತ ಎಂದರ್ಥ.

ಆರ್ಯರು ಮೊದಲು ಸ್ಥಳದಿಂದ ಸ್ಥಳಕ್ಕೆ ವಲಸೆ ಹೋದದ್ದು ನಿಜ. ಅಲ್ಲದೆ ಅವರು ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಅಷ್ಟಾಗಿ ಮನಗೊಡದಿದ್ದವರೆಂಬುದೂ ನಿಜ. ಆದರೆ ಅವರು ಸಲ್ಲಕ್ಷಣರಿದ್ದಂತೆಯೇ ಸುಸಂಸ್ಕೃತರೂ ಆಗಿದ್ದರು. ಆಗಲೆ ಅವರಿಗೆ ಮಾನವನ ಬಾಳಿಗೆ ಅನುಕೂಲವಾದ ಎಲ್ಲ ಸೌಲಭ್ಯಗಳನ್ನೂ ಕಲ್ಪಿಸಿಕೊಳ್ಳುವುದು ಗೊತ್ತಿತ್ತು. ಇದಕ್ಕಿಂತಲೂ ಅದ್ಭುತವಾದದ್ದೆಂದರೆ ಅವರ ಬುದ್ಧಿವಿಕಾಸಗೊಂಡಿತ್ತು. ವಿಶಾಲ ದೃಷ್ಟಿಯಿಂದ ಪಾರಮಾರ್ಥಿಕ ವಿಷಯಗಳನ್ನು ಯೋಚಿಸುತ್ತಿದ್ದರು. ಸೃಷ್ಟಿ, ಸ್ಥಿತಿ, ಲಯಗಳ ಕಾರ್ಯ ಕಾರಣವನ್ನು ತಮ್ಮ ಸುತ್ತುಮುತ್ತಲಿನ ಘಟನೆಗಳ ಆಧಾರದ ಮೇಲೆ ಭವ್ಯವಾಗಿ ಊಹಿಸುವಷ್ಟರಮಟ್ಟಿನ ತಿಳುವಳಿಕೆಯುಳ್ಳವರಾಗಿದ್ದರು. ಇಹಜೀವನಕ್ಕಿಂತ ಭಿನ್ನವಾದ ಮಹತ್ವಪೂರಿತವಾದ ಪಾರಮಾರ್ಥಿಕ ವಿಚಾರದಲ್ಲಿ ಅವರ ಬುದ್ಧಿ ಓಡುತ್ತಿತ್ತು. ಅವರ ಭಾಷೆಯಾದ ಸಂಸ್ಕೃತವೋ ಮನೋರಂಜಕವಾಗಿತ್ತು. ಗಾಂಭೀರ್ಯದಿಂದ ತುಂಬಿ ತುಳುಕಾಡುತ್ತಿತ್ತು.

ಈ ಬಗೆಯಲ್ಲಿ ಆಗಿನ ಯಾವ ಜನಾಂಗವೂ ಇವರ ಮಟ್ಟದಲ್ಲಿರಲಿಲ್ಲ. ನಿಜ; ಈಜಿಪ್ಟ್, ಮೆಸಪೊಟೋಮಿಯಾ, ಕ್ರೀಟ್ ಭಾರತದ

ದ್ರಾವಿಡ ರಾಷ್ಟ್ರಗಳು, ಇಹಜೀವನೋಪಾಯವನ್ನು ನಿರ್ಮಿಸಿ ಸುಖ ಭೋಗಿಸುವ ಕಲೆಯನ್ನು ಬೆಳಸಿಕೊಂಡಿದ್ದವು. ಕುಶಲವಿದ್ಯೆಯಲ್ಲಿ ನೈಪುಣ್ಯತೆ ಪಡೆದಿದ್ದವು. ಆದರೆ ಜೀವನರಹಸ್ಯದಂತಹ ಗಹನ ವಿಷಯಗಳು ಅವರ ತಲೆಗೆ ಹೊಕ್ಕಿರಲಿಲ್ಲ. ಹೊಕ್ಕಿದ್ದರೂ ಆ ಸಮಸ್ಯೆಗಳನ್ನು ಸಮಂಜಸವಾಗಿ ಬಿಡಿಸುವಷ್ಟರಮಟ್ಟಿಗೆ ಆ ಜನರ ಬುದ್ಧಿ ತಿಳಿಯಾಗಿರಲಿಲ್ಲ. ಆದರೆ ಆ ಬುದ್ಧಿ ಆರ್ಯರಿಗಿತ್ತು. ಚೀನೀಯರು ಆ ವಿಷಯದಲ್ಲಿ ಆ ಮಟ್ಟದ ಜನರೇ ಎಂಬ ನಂಬಿಕೆ ಇದೆ.

ಆರ್ಯರು ಭಾರತದಲ್ಲಿ ಕಾಲಿಟ್ಟ ಕೂಡಲೇ ಅವರಿಗೆ ಸುಸ್ವಾಗತ ದೊರೆಯಲಿಲ್ಲ. ಸಾವಿರಾರು ವರ್ಷಗಳಿಂದ ರಾಷ್ಟ್ರಗಳನ್ನು ಕಟ್ಟಿ ವೈಭವದಿಂದ ಮೆರೆಯುತ್ತಿದ್ದ ದ್ರಾವಿಡರು ಆರ್ಯರನ್ನು ತಡೆದರು. ದೊಡ್ಡದೊಡ್ಡ ಯುದ್ಧಗಳೇ ನಡೆದವು. ರಕ್ತಪಾತವಾಯಿತು. ಆದರೆ ಯುದ್ಧಕಲೆಯಲ್ಲಿಯೂ ಬಲಿಷ್ಠರಾಗಿದ್ದ ಆರ್ಯರು ದ್ರಾವಿಡರನ್ನು ಸೋಲಿಸಿ ಹಿಂದು ಹಿಂದಕ್ಕಟ್ಟಿದರು. ದ್ರಾವಿಡರು ಸೋತು ಹಿಂದೆ ಹಿಂದೆ ಹೋದಂತೆ ಹೊಸ ಹೊಸ ಆರ್ಯರ ಗುಂಪು ಈ ದೇಶದಲ್ಲಿ ತುಂಬಿದವು. ಕ್ರಮೇಣ ದ್ರಾವಿಡ ರಾಷ್ಟ್ರಗಳೆಲ್ಲ ಆರ್ಯರ ವಶವಾದವು. ಸೋತ ದ್ರಾವಿಡರು ದಕ್ಷಿಣದ ಕಡೆಗೆ ಹೋಗಿ ಹೊಸ ಹೊಸ ಪ್ರದೇಶಗಳಲ್ಲಿ ನೆಲಸಬೇಕಾಗಿ ಬಂತು. ಈಗ ದಕ್ಷಿಣ ಇಂಡಿಯಾದಲ್ಲಿರುವ ಕನ್ನಡ, ತಮಿಳು, ತೆಲಗು, ಮಲೆಯಾಳಿ ಜನರ ಪೂರ್ವಿಕರು ದ್ರಾವಿಡರು ಎಂದು ನಂಬಲಾಗಿದೆ. ಹಿಂದೆ ನಿಂತವರು ಪಾಪ, ತಾವು ಸ್ವತಂತ್ರರಾಗಿ ವೈಭವದಿಂದ ಬಾಳಿದ ನಾಡಿನಲ್ಲೆ ದಸ್ಯುಗಳೆಂದು ಕರೆಸಿಕೊಂಡು ಪರಕೀಯರಿಗೆ ಗುಲಾಮರಾಗಿ ಬಾಳು ನೀಸಬೇಕಾಯಿತು.

ಆರ್ಯರು ಇಷ್ಟೆಲ್ಲ ಅವಾಂತರ ಮಾಡಿದುದೇನೋ ಸರಿ. ಆದರೆ ಇತರ ರಾಷ್ಟ್ರಗಳಲ್ಲಿ ಮಾಡಿದಂತೆ ಇಲ್ಲಿಯ ಸಂಸ್ಕೃತಿಯನ್ನೇ ತೊಡೆದು ಹಾಕಿ ಬಿಡಲಿಲ್ಲ. ಅವರ ಒಳ್ಳೆಯಗುಣ, ವಿಶಾಲದೃಷ್ಟಿ ದ್ರಾವಿಡ ಸಂ

ಸ್ಕೃತಿಯನ್ನು ಹಾಳುಮಾಡದಂತೆ ತಡೆಯಿತು. ಕ್ರಮೇಣ ಆರ್ಯರು ದ್ರಾವಿಡರೊಡನೆ ಬೆರೆತರು. ದ್ರಾವಿಡ ಸಂಸ್ಕೃತಿಯಿಂದ ತಮಗೆ ಒಳ್ಳೆಯ ದೆಂದು ಕಂಡದ್ದನ್ನೆಲ್ಲ ತಮ್ಮದು ಮಾಡಿಕೊಂಡರು. ಹೀಗೆ ದ್ರಾವಿಡರಿಂದ ಪ್ರಾರಂಭವಾದ ಈ ಪುರಾತನ ಮಹಾನಾಡಿನ ಸಂಸ್ಕೃತಿ ಆರ್ಯರಿಂದ ಪೋಷಿತವಾಗಿ ಕವಲೊಡೆದು ಚಿಗುರಿತು. ಇದುವರೆಗೂ ಅದೇ ಗತಿಯಲ್ಲಿ ಒಮ್ಮೊಮ್ಮೆ ಸುಷುಪ್ತಾವಸ್ಥೆಯನ್ನು ದಾಟಿದರೂ - ಅವಿನಾಶಿಯಾಗಿ ಬಂದಿದೆ.

ಆರ್ಯರಿಗೆ ತಾವು ಇತರರಿಗೆ ಉತ್ತಮರು, ತಿಳಿದವರು ಎಂಬ ಹೆಮ್ಮೆ ಇತ್ತು. ಅದರಿಂದ ರಾಜ್ಯಾಡಳಿತವನ್ನೂ ಜ್ಞಾನಪ್ರಸಾರವನ್ನೂ ಮಾಡಲು ತಾವೇ ಶಕ್ತರೆಂದುಕೊಂಡರು. ಇತರರು ಅವರ ಸೇವೆ ಮಾಡಿಕೊಂಡು ಮುಕ್ತರಾಗಬೇಕೆಂಬ ಹಂಬಲ ಅವರಿಗಿತ್ತು. ಹೀಗಾಗಿ ಮೇಲು ಕೀಳು ಭಾವನೆಯ ಅಂಕುರವಾಯಿತು. ಆದರೆ ಆರ್ಯರ ವಿಶಾಲಬುದ್ಧಿ ನ್ಯಾಯಾ ನ್ಯಾಯದ ತುಲನೆಯ ಕಡೆಗೆ ಅವರನ್ನು ಒಲಿಸಿತು. ಅದರಿಂದಾಗಿ ಈ ಮೇಲು ಕೀಳು ಭಾವನೆ ಬೆಳೆಯಲಿಲ್ಲ. ಇಷ್ಟರಲ್ಲಾಗಲೆ ದ್ರಾವಿಡರೂ ಆರ್ಯರೂ ಬೆರೆತುಹೋಗಿದ್ದರು. ಅವರ ಸೂಕ್ಷ್ಮಬುದ್ಧಿ ಈ ಫಲವತ್ತಾದ ಸೌಂದರ್ಯದಿಂದ ಕೂಡಿದ ನೈಸರ್ಗಿಕ ಸಂಪತ್ತನ್ನೊಳಗೊಂಡಿದ್ದ ನಾಡಿನ ವಾಸ ಆರ್ಯರ ಜ್ಞಾನವನ್ನು ತುಂಬ ಬೆಳೆಸಿತು. ಹೊಸ ಹೊಸ ರಾಷ್ಟ್ರಗಳು ಹುಟ್ಟಿಕೊಂಡವು. ರಾಜ್ಯಾಡಳಿತವು ವ್ಯವಸ್ಥಿತವಾಯಿತು. ದೊಡ್ಡ ದೊಡ್ಡ ವಿಭೂತಿಗಳ ಉದಯವಾಯಿತು. ಶ್ರುತಿ, ಸ್ಮೃತಿ, ಶಾಸ್ತ್ರ ಪುರಾಣಗಳು ಉದ್ಭವವಾದವು.

ಶ್ರುತಿ ಎಂದರೆ ವೇದ. ವೇದವೇ ಅವರ ಧರ್ಮಕ್ಕೆ ಆಧಾರ. 'ವೇದ' ಎಂದರೆ ಜ್ಞಾನವೆಂದರ್ಥ. ಶ್ರುತಿ, ಸಂಹಿತೆಗಳೆಂಬ ಸ್ತೋತ್ರ ಭಾಗ. ಬ್ರಾಹ್ಮಣಗಳೆಂಬ ಯಜ್ಞಯಾಗಗಳ ರೀತಿ ನೀತಿಯನ್ನು ಹೇಳು ತ್ತಿದ್ದ ಭಾಗ ಆರಣ್ಯಕಗಳು ಮತ್ತು ಉಪನಿಷತ್ತುಗಳು ಎಂಬ ತತ್ವ ವಿಚಾರ ಈ ಭಾಗಗಳನ್ನೊಳಗೊಂಡಿದೆ. ಮೊದಮೊದಲು ಇವು

ಗುರುವಿನ ಬಾಯಿಂದ ಶಿಷ್ಯನ ಬಾಯಿಗೆ ಹರಿಯುತ್ತಿದ್ದವು. ಬಾಯಿಪಾಠವೇ ವೇದದಪ್ರಸಾರಕ್ಕೆ ಮೂಲವಾಗಿದ್ದುದರಿಂದ ಅದನ್ನು ಶ್ರುತಿಯೆಂದು ಕರೆಯಲಾಯಿತು. ವೇದ ಸೃಷ್ಟಿಕರ್ತನಾದ ಬ್ರಹ್ಮನಿಂದಲೇ ಉಸುರಲ್ಪಾಯಿ



ಸೃಷ್ಟಿಕರ್ತ ಬ್ರಹ್ಮ

ತೆಂದೂ ಅದನ್ನು ಋಷಿಗಳು ಕೇಳಿ ಪ್ರಚಾರಮಾಡಿದುದರಿಂದ ಈ ಜ್ಞಾನದ ಅರಿವಿಗಾಗಿ ಯಾರು ಏಕಮನಸ್ಕರಾಗಿ ತಪವಾಚರಿಸುತ್ತಿದ್ದರೋ ಆ ಋಷಿಗಳು ಅದನ್ನು ಆಲಿಸಿ ತಿಳಿದರೆಂದೂ ಅದಕ್ಕೆ ಶ್ರುತಿ ಎಂದು ಹೆಸರಾಯಿತೆಂದೂ ಹೇಳುವುದುಂಟು. ಈ ಗಹನ ವಿಷಯದಲ್ಲಿ ಪಾಠ ಕಲಿಯಲು

ಸಾಧಾರಣ ಶಿಷ್ಯರಿಂದಾಗುತ್ತಿರಲಿಲ್ಲ. ಅದು ಬುದ್ಧಿಶಕ್ತಿಯುಳ್ಳ ಯುವಕರಿಗೇ ಸಾಧ್ಯವಿತ್ತು. ಈ ಬ್ರಹ್ಮಜ್ಞಾನವನ್ನು ಪಡೆಯಲು ಶಕ್ತರಾಗಿದ್ದವರನ್ನು ಬ್ರಾಹ್ಮಣರೆಂದು ಕರೆದಿರಬೇಕು. ಹಾಗೆಯೇ ಯುದ್ಧೋತ್ಸಾಹಿಗಳೂ ಶಕ್ತರೂ ರಾಜ್ಯಾಡಳಿತವನ್ನು ವಹಿಸುವುದು ಸಹಜ. ಅವರು ಕ್ಷತ್ರಿಯರಾದರು. ವ್ಯಾಪಾರದಲ್ಲಿಯೂ ವ್ಯವಸಾಯದಲ್ಲಿಯೂ ಕುಶಲರಾದವರು ವೈಶ್ಯರಾದರು. ಮಿಕ್ಕ ಕೆಲಸಗಾರರನ್ನೆಲ್ಲ ಶೂದ್ರರೆಂದು ಕರೆಯಲಾಯಿತು. ಕಸಬು ಕುಲಗತವಾಗಿ ಬಂದರೆ ನೈಪುಣ್ಯತೆ ಬರುವುದೆಂಬುದು ಈ ಚಾತುರ್ವರ್ಣದ ಉದ್ದೇಶವಿರಬೇಕು. ಈ ಚಾತುರ್ವರ್ಣಕ್ಕೆ ಆಧಾರ ಕಸಬೇ. ಹುಟ್ಟಿನ ಆಧಾರದ ಮೇಲೆ ಚಾತುರ್ವರ್ಣ ನಿರ್ಮಾಣವೆಂಬುದಕ್ಕೆ ವೇದಗಳಲ್ಲಿ ಆಧಾರವಿಲ್ಲ. ಸಮಾಜದ ಉನ್ನತಿಯ ಕೆಲಸದಲ್ಲಿ ಮೇಲು ಕೀಳು ಭಾವನೆ ಇರಲಾರದು. ಯಾವ ಕೆಲಸದಲ್ಲಾಗಲಿ ಕೌಶಲ ತೋರಿದವನಿಗೆ ಗೌರವವಿತ್ತು. ಯಾವ ವರ್ಣದವನಾದರೂ ತನ್ನ ಶಕ್ತಿಯ ಆಧಾರದ ಮೇಲೆ ಯಾವ ವರ್ಣದವರ ಕಾರ್ಯವನ್ನಾದರೂ ಕೈಗೊಂಡು ನಡೆಸಬಹುದಾಗಿತ್ತು. ಆ ಕಾರ್ಯ ನಡೆಸಿದರೆ ಆ ವರ್ಣದವನಾಗಿ ಅವನು ಗಣನೆಗೆ ಬರುತ್ತಿದ್ದ. ಇದಕ್ಕೆ ಶಾಸ್ತ್ರಾಧಾರ ಬೇಕಾದಷ್ಟಿದೆ. ವಶಿಷ್ಠ, ವಿಶ್ವಾಮಿತ್ರ, ವಾಲ್ಮೀಕಿ ಇವರೆಲ್ಲ ಇದಕ್ಕೆ ಉದಾಹರಣೆ. ಆದರೆ ಒಂದು ವರ್ಣದವರಿಗೆ ಮತ್ತೊಂದು ವರ್ಣದವರು ಉತ್ತಮರು ಅಥವಾ ಹೀನರು ಎಂಬ ಭೇದ ಆಮೇಲೆ ಜಾಣರಾದ ಕೆಲವು ಸ್ವಾರ್ಥಪರರಿಂದ ಸಮಾಜದಲ್ಲಿ ಆಚಾರವಾಗಿ ಬಂದು ಹಿಂದೂ ಜನಾಂಗದಲ್ಲಿ ಒಡಕು ತಂದು ಒಂದು ಕಳಂಕಕ್ಕೆ ಕಾರಣವಾಗಿರಬೇಕೆಂದು ಕಾಣುತ್ತದೆ. ಆಮೇಲಾಮೇಲೆ ಸನಾತನಧರ್ಮದ ತಿಳಿವಳಿಕೆ ಜನರಿಂದ ಮರೆಯುತ್ತ ಬಂತು. ಅರ್ಥವಿಲ್ಲದ ಆಚಾರ ಅಪಚಾರಗಳನ್ನೇ ಜನರು ಪಟ್ಟುಹಿಡಿದರು. ಈ ಆಚಾರಗಳ ಜೊತೆಗೆ ಮತ್ತಷ್ಟು ಅಂತಹದೇ ಆಚಾರಗಳನ್ನು ಸೇರಿಸಿ ಜನರಲ್ಲಿ ಧರ್ಮ ಮೌಢ್ಯವನ್ನು ಬೆಳೆಸಿದ ಆಗಿನ ಜಾಣರೆನಿಸಿಕೊಂಡವರ ತಪ್ಪು ಅಷ್ಟಿಷ್ಟಲ್ಲ. ಅಷ್ಟೇ ಆಗಿದ್ದರೆ ಈ ಸನಾತನ ಧರ್ಮ ಇಷ್ಟರಲ್ಲಾಗಲೆ ಅಳಿದುಹೋಗುತ್ತಿತ್ತೊ ಏನೋ. ಆದರೆ

ಸುದೈವದಿಂದ ರಾಮಾಯಣ, ಭಾರತ, ಭಾಗವತ ಪುರಾಣಗಳೂ ಆಗಾಗ್ಗೆ ಜನ್ಮವೆತ್ತಿದ ಮಹಾತ್ಮರೂ ಧರ್ಮಬೋಧೆ ಮಾಡಿ ಜನರ ದಮನಿಯಲ್ಲಿ ಬಂದ ಸನಾತನ ಧರ್ಮವಾಹಿನಿ ಬತ್ತದಂತಾಯಿತು.

## ವೇದ ಶಾಸ್ತ್ರ—ತತ್ವ

ವೇದಗಳಲ್ಲಿ ಋಗ್ವೇದವೇ ಪುರಾತನವಾದುದು. ಆಮೇಲೆ ಯಜುರ್ವೇದ, ಸಾಮವೇದ. ಕೊನೆಯಲ್ಲಿ ಅಥರ್ವವೇದವನ್ನು ಈ ಗುಂಪಿಗೆ ಸೇರಿಸಲಾಯಿತು. ಭಾರತದ ಶಾಸ್ತ್ರವೇತ್ತರು ಹಲವರು ಋಗ್ವೇದ ಕಾಲವು ೧೫-೨೦ ಸಾವಿರ ವರ್ಷಗಳ ಹಿಂದೆ ಎಂದು ಹೇಳುತ್ತಾರೆ. ಆದರೆ ಈ ಹೇಳಿಕೆಗೆ ಒಮ್ಮುಖವಾದ ಒಪ್ಪಿಗೆ ಸಿಕ್ಕಿಲ್ಲ. ಏನಾದರಾಗಲಿ ಆರ್ಯರು ಈ ದೇಶಕ್ಕೆ ತಂದ ಮಹಾಭಾಗ್ಯಗಳಲ್ಲಿ ಇದುಒಂದು. ಈ ರೀತಿಯಲ್ಲಿ ಆರ್ಯರು ಜ್ಞಾನ ಬೆಳವಣಿಗೆಯಲ್ಲಿ ಒಂದು ದೊಡ್ಡ ಕ್ರಾಂತಿಯನ್ನೆಬ್ಬಿಸಿದರು. ಉದಾತ್ತವಾದ ಉಪನಿಷತ್ತುಗಳೆಂಬ ಅಮೋಘವಾದ ತತ್ವವಿಚಾರ ಬಂತು. ಈ ಉಪನಿಷತ್ತುಗಳಿಗೆ ವೇದಾಂತಗಳೆಂದು ಹೆಸರು. ಅಂದರೆ ಜ್ಞಾನದ ಗುರಿ ಎಂದರ್ಥ. ನಿಜವಾಗಿಯೂ ಉಪನಿಷತ್ತುಗಳು ಜ್ಞಾನದ ಗುರಿ ಮುಟ್ಟಿಸುವ ತತ್ವವಿಚಾರ; ಗುರು ಶಿಷ್ಯ ಸಂವಾದ ರೂಪದಲ್ಲಿ ಗುರು ಮುಖದಿಂದ ಶಿಷ್ಯರಿಗೆ ದೊರಕುತ್ತಿದ್ದ ವಿದ್ಯೆ.

ವೇದಕಾಲಕ್ಕೇ ಚತುರಾಶ್ರಮಗಳು ಉಂಟಾಗಿದ್ದವು. ಮಾನವನ ಬಾಳನ್ನು ನಾಲ್ಕುಭಾಗ ಮಾಡಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ತ, ಸಂನ್ಯಾಸ ಎಂದು ನಾಲ್ಕು ಅವಸ್ಥೆಗಳು ವ್ಯವಸ್ಥೆಯಾಗಿದ್ದವು. ಬ್ರಹ್ಮಚಾರಿ ಜನಜಂಗುಳಿಗೆ ದೂರವಾಗಿದ್ದ ಪ್ರಕೃತಿಯ ಮಡುಲಲ್ಲಿ ನಿರ್ಮಿತವಾಗಿದ್ದ ಗುರುಕುಲಾಶ್ರಮದಲ್ಲಿ ಹೋಗಿ ನೆಲಸಬೇಕಾಗಿತ್ತು ಜ್ಞಾನಾರ್ಜನೆಗಾಗಿ. ಗುರು ಸೇವೆಯಿಂದ, ಗುರು ಸಹವಾಸದಿಂದ ಜ್ಞಾನ ಪಡೆಯುತ್ತಿದ್ದನು.



* ಭಗವಂತನು ನಮ್ಮನ್ನು ಒಟ್ಟಿಗೆ ಕಾಪಾಡಲಿ.
ನಮ್ಮನ್ನು ಒಟ್ಟಿಗೆ ಪೋಷಿಸಲಿ.
ನಾವು ಒಟ್ಟಿಗೆ ವೀರ್ಯವಂತರಾಗೋಣ.
ನಮ್ಮ ಅಧ್ಯಯನ ತೇಜಸ್ವಿಯಾಗಲಿ.
ನಮ್ಮಲ್ಲಿ ದ್ವೇಷಾಸೂಯೆಗಳು ಇಲ್ಲದಿರಲಿ. ಶಾಂತಿ ನೆಲಸಲಿ.

ಆ ಗುರು ಶಿಷ್ಯ ಸಂಬಂಧ ಎಷ್ಟರಮಟ್ಟಿಗಿತ್ತೆಂಬುದನ್ನು ದಿನವೂ ಮುಂಜಾನೆ, ಸಂಜೆ ಗುರು ಶಿಷ್ಯರು ಒಟ್ಟಿಗೆ ಸೇರಿ ಧ್ಯಾನಿಸುತ್ತಿದ್ದ ಶಾಂತಿ ಮಂತ್ರದಿಂದ ತಿಳಿಯಬಹುದು.

ಯುವಕ ಜ್ಞಾನಿಯಾಗಿ ಗುರುವಿನಿಂದ ಜೀವನರಹಸ್ಯವನ್ನು ಅರಿತ ಮೇಲೆ ಅವನು ಗೃಹಸ್ಥನಾಗಲು ಯೋಗ್ಯ. ಗೃಹಸ್ಥ ಸಂಸಾರ ಹೂಡಿ

---

ಶಾಂತಿಮಂತ್ರ: * ಸಹ ನಾವವತು, ಸಹನೌ ಭುನಕ್ತು
ಸಹ ವೀರ್ಯಂ ಕರವಾವಹೈ
ತೇಜಸ್ವಿನಾವಧೀತಮಸ್ತು, ಮಾ ವಿದ್ವಿಷಾವಹೈ
ಓಂ ಶಾಂತಿಃ ಶಾಂತಿಃ ಶಾಂತಿಃ.

—ಕಠೋಪನಿಷತ್.

ಮಕ್ಕಳು ಮರಿಗಳನ್ನು ಹೊಂದಿ ಧರ್ಮದಿಂದ ನಡೆದು ತನ್ನ ಕರ್ತವ್ಯವನ್ನು ನೆರವೇರಿಸಿ ಮಾತಾಪಿತೃ ಋಣ, ದೇಶ ಋಣದಿಂದ ಮುಕ್ತನಾಗುವನು. ಆಮೇಲೆ ಸಂಸಾರಭಾರವನ್ನು ವಯಸ್ಕರಾದ ತನ್ನ ಮಕ್ಕಳಿಗೆ ವಹಿಸಿ ಸತಿಯೊಡನೆ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವನು. ಕಾಡಿಗೆ ಹೋಗಿ ಆಶ್ರಮ ಕಟ್ಟಿ ಜ್ಞಾನದಲ್ಲಿ ಪರಿಪಕ್ವತೆ ಪಡೆಯಲು ತಪಸ್ಸು ಮಾಡುವನು. ಆ ಗುರಿ ಮುಟ್ಟಿದಮೇಲೆ ಸಂನ್ಯಾಸಿಯಾಗಿ ಜನಸೇವೆ ಸಲ್ಲಿಸಿ ಋಷಿ ಋಣದಿಂದ ಮುಕ್ತನಾಗುವನು. ಇದೇ ವೇದಕಾಲದ ಭಾರತೀಯರ ಬಾಳಿನ ವೈಭವ.

ವೇದಶಾಸ್ತ್ರ ಪುರಾಣಗಳು ಆ ಕಾಲದ ಋಷಿಗಳ ಜ್ಞಾನದ ಬೆಳಕಿನ ಫಲ. ಅವರು ಮಹಾತ್ಮರು. ಪ್ರಪಂಚದ ಹಿತದಲ್ಲಿ ಐಹಿಕ ಸುಖವನ್ನು ತೃಣವಾಗೆಣಿಸಿ ಕಠಿನ ತಪಸ್ಸುಮಾಡಿ ಲೋಕಕಲ್ಯಾಣಕ್ಕಾಗಿ ಜ್ಞಾನದ ಬೆಳಕನ್ನು ಹೊಂದುತ್ತಿದ್ದರು. ಆ ಮಹಾತ್ಮರು ರಾಜರಿಗೂ ಪ್ರಜೆಗಳಿಗೂ ಪೂಜ್ಯರಾಗಿದ್ದರು. ಅಷ್ಟೇ ಅಲ್ಲ, ಎಲ್ಲರಿಗೂ ಮಾರ್ಗದರ್ಶಕರಾಗಿದ್ದರು. ಇವರು ತಮ್ಮ ದಿವ್ಯಜ್ಞಾನದಿಂದ ಮಹತ್ತಾದ ಸಂಕಲ್ಪದಿಂದ ಪವಿತ್ರರಾಗಿದ್ದು ದೈವಬಲವನ್ನು ಸಾಧಿಸಿ ತ್ರಿಕಾಲಜ್ಞಾನಿಗಳಾಗಿ ತಮ್ಮ ತಪಶ್ಶಕ್ತಿಯಿಂದ ದೇಶಕ್ಕೆ ಸುಖ ಸೌಭಾಗ್ಯವನ್ನು ತರಲು ಶಕ್ತರಾಗಿದ್ದರು. ಜನರಿಗೆ ಅವರವರ ಜ್ಞಾನದ ಅಂತಸ್ಥಿಗೆ ತಕ್ಕಂತೆ ಮೂರ್ತಿ ಪೂಜೆಗೆ ಅವಕಾಶವಿದ್ದರೂ ದೇವರೊಬ್ಬನೇ ಎಂಬ ನಂಬುಗೆ ಇತ್ತು. ಜೀವಿಗೆ ಮರಣವಿದ್ದರೂ ಆತ್ಮ ಅಮರವಾದದ್ದೆಂಬ ಘನತತ್ವವನ್ನು ಸಾರಿದರು. ವಶಿಷ್ಠ ವಿಶ್ವಾಮಿತ್ರ, ಜಮದಗ್ನಿ, ಗೌತಮ, ಭೃಗು, ಅತ್ರಿ, ಕಾಶ್ಯಪ ಮೊದಲಾದವರು ಪ್ರಮುಖರಾದ ಮಹರ್ಷಿಗಳು. ಋಷಿಪಂಕ್ತಿ ಬೆಳೆದಂತೆ ಆಮೇಲಾಮೇಲೆ ಬಂದವರು ಕಾಲ ದೇಶಗಳನ್ನನುಸರಿಸಿ ಈ ಸನಾತನ ಧರ್ಮವನ್ನು ಬೆಳೆಸಿದರು. ಆದರಿಂದ ಈ ಧರ್ಮದ ವೈಶಾಲ್ಯ ಅತ್ಯಂತ ಹಿರಿದು. ಇದರ ತತ್ವ ಅತ್ಯಂತ ಘನವಾದುದು. ಪ್ರಪಂಚದ ಅಲ್ಲಲ್ಲಿ ಕಾಲಕಾಲಕ್ಕೆ ಹುಟ್ಟಿಕೊಂಡ ಯಾವ ಧರ್ಮದಲ್ಲಿಯೆ ಆಗಲಿ ಹೇಳುವ ತತ್ವ ತನ್ನ ಮಡಲಿ

ನಲ್ಲೇ ಇರುವುದನ್ನು ತೋರುವ ಹಿರಿಮೆ ಈ ಸನಾತನ ಧರ್ಮಕ್ಕಿದೆ. ಅವರವರ ಜ್ಞಾನದ ಅಂತಸ್ತಿಗೆ ತಕ್ಕಂತೆ ಬಹುದೇವತಾಪೂಜೆಯಿಂದ ಹಿಡಿದು ಏಕೇಶ್ವರವಾದದವರೆಗೆ, ಅದ್ವೈತದವರೆಗೆ ಜನರಿಗೆ ಆಶ್ರಯ ಕೊಡುವ ಧರ್ಮ ಇದು.

ಸಮಾಜವೂ ವ್ಯಕ್ತಿಯೂ ಅನುಸರಿಸಬೇಕಾದ ನ್ಯಾಯ, ನೀತಿ, ಆಚಾರ, ಧರ್ಮಗಳನ್ನು ವಿವರಿಸುವ ಗ್ರಂಥಗಳು ಸ್ಮೃತಿಗಳು. ಸ್ಮೃತಿ ಕಾರರಲ್ಲಿ ಮುಖ್ಯರಾದವರು ಮನು, ಗೌತಮ, ಆಪಸ್ತಂಭ, ಆಶ್ವಲಾಯನ, ಪರಾಶರ, ಬೃಹಸ್ಪತಿ, ನಾರದ, ಗೋಬಿಲ. ಸ್ಮೃತಿಗಳ ಕಾಲದಲ್ಲೇ ಮಹಾಕಾವ್ಯಗಳೂ ಉಂಟಾದುದು. ಇದು ವೇದಕಾಲಕ್ಕೆ ತುಂಬ ಆಮೇಲೆ. ರಾಮಾಯಣ, ಮಹಾಭಾರತಗಳು ಮಹಾಕಾವ್ಯಗಳು. ಈ ಕಾಲ ಸುಮಾರು ಕ್ರಿ. ಪೂ. ೨೦೦೦ ದಿಂದ ಸುಮಾರು ೧೫೦೦ ರ ವರೆಗೆಂದು ಹೇಳಬಹುದು. ಈ ಮಹಾಕಾವ್ಯಗಳ ಹೊತ್ತಿಗೆ ಆಗಲೇ ಆರ್ಯ ಸಾಮ್ರಾಜ್ಯಗಳು ಹುಟ್ಟಿಕೊಂಡಿದ್ದವು. ಆಗಲೇ ಸಮಾಜವ್ಯವಸ್ಥೆ ಇನ್ನೂ ಬಿಗಿಗೊಂಡಿತ್ತು. ರಾಜ್ಯಾಡಳಿತಕ್ರಮ ಬಲವಾಗಿ ಬೆಳೆದಿತ್ತು. ದೇಶದಲ್ಲಿ ಸುಖ ಸಂತೋಷ ಸಮೃದ್ಧಿಯಾಗಿದ್ದರೂ ರಾಜರಾಜರಿಗೆ ಯುದ್ಧಗಳು ನಡೆಯುತ್ತಿದ್ದವು. ಯುದ್ಧಶಾಸ್ತ್ರ ಅಗಾಧವಾಗಿ ಬೆಳೆದಿತ್ತು. ನಾನಾಬಗೆಯ ರಥಗಳನ್ನು ಉಪಯೋಗಿಸುತ್ತಿದ್ದರು. ನಾನಾಬಗೆಯ ಆಯುಧಗಳನ್ನು ಬಳಸುತ್ತಿದ್ದರು. ಆಗಲೇ ಕಬ್ಬಿಣದ ಉಪಯೋಗವೂ ಗೊತ್ತಿದ್ದೀತು. ಹತ್ತಿ, ರೇಷ್ಮೆ, ನಾರಿನ ಬಟ್ಟೆಗಳನ್ನು ಉಪಯೋಗಿಸುತ್ತಿದ್ದರು. ಚಿನ್ನ, ಬೆಳ್ಳಿಯ ಆಭರಣಗಳನ್ನು ಧರಿಸುತ್ತಿದ್ದರು.

ಸಮಾಜ ನಾನಾಮುಖದಲ್ಲಿ ಬೆಳೆದಿದ್ದುದರಿಂದ ಜನರ ಬಾಳಿನ ರೀತಿಯಲ್ಲಿ ಕುಂದು ಕೊರತೆಗಳು ತಲೆದೋರಿದವು. ಇದನ್ನರಿತ ಜ್ಞಾನಿಗಳು ಅವುಗಳನ್ನು ಜೀವನದಿಂದ, ಸಮಾಜದಿಂದ ಅಳಿಸಿ ಜನಜೀವನ ಸುಗಮವೂ ಶಾಂತಿಯುತವೂ ಆಗುವಂತೆ ಮಾಡಲು ದುಡಿಯುತ್ತಿದ್ದರು.

ಜನರಲ್ಲಿ ಪಾಪಭೀತಿಯನ್ನುಂಟುಮಾಡುವ ಸಲುವಾಗಿ ನಾಕ ನರಕಗಳನ್ನು ಸೃಷ್ಟಿಸಿ ಅವುಗಳ ವಿಷಯವನ್ನು ಹೃದಯಂಗಮವಾಗಿ ಹೇಳಿದರು. ಯಜ್ಞ ಯಾಗಾದಿಗಳು ಇನ್ನೂ ಹೆಚ್ಚಾಗಿ ನಡೆಯುತ್ತಿದ್ದವು.

ಸಮಾಜದಲ್ಲಿ ಹೆಂಗಸರಿಗೆ ತುಂಬಾ ಮರ್ಯಾದೆ ಇತ್ತು. ಅವರ ವಿಷಯದಲ್ಲಿ ಪವಿತ್ರಭಾವನೆ ಮೂಡಿತ್ತು. ಹಿರಿಯರಿಗೆ ಕಿರಿಯರು ವಿಧೇಯರಾಗಿರಬೇಕೆಂಬುದು ನಿಯಮವಾಗಿತ್ತು. ತಂದೆ ಸಂಸಾರದ ಯಜಮಾನ. ಅವನ ಆಜ್ಞೆಯನ್ನು ಸಂಸಾರದಲ್ಲಿ ಯಾರೂ ಮೀರುವ ಹಾಗೇ ಇರಲಿಲ್ಲ.

## ರಾಮಾಯಣ

ಮಹಾಕಾವ್ಯಗಳಲ್ಲಿ ರಾಮಾಯಣದ ಕಾಲ ಸುಮಾರು ಕ್ರಿ. ಪೂ. ೨೦೦೦ ವರ್ಷಗಳ ಸುಮಾರಿನಲ್ಲಿ. ರಾಮಾಯಣವನ್ನು ರಚಿಸಿದ ವಾಲ್ಮೀಕಿ ಋಷಿಯೂ ಅಹುದು, ಮಹಾಕವಿಯೂ ಅಹುದು. ಸೂರ್ಯವಂಶದ ರಾಜರ ಕಥೆ ಇದು. ಈ ಕಾವ್ಯದ ಕಥಾನಾಯಕ ಶ್ರೀರಾಮಚಂದ್ರ; ನಾಯಕಿ ಅವನ ಹೆಂಡತಿ ಸೀತೆ. ಇವರು ಎಲ್ಲರಿಗೂ ಪ್ರಿಯರು. ಎಲ್ಲರ ಹಿತಕ್ಕಾಗಿ ಬದುಕುತ್ತಿದ್ದವರು. ಶ್ರೀರಾಮ ಪಿತೃವಾಕ್ಯ ಪರಿಪಾಲನೆ ಗೆಂದೂ, ದುಷ್ಟ ಶಿಕ್ಷಣ ಶಿಷ್ಟ ರಕ್ಷಣೆಗಾಗಿಯೂ ೧೪ ವರ್ಷ, ಮಡದಿ ಯೊಡನೆ, ತಮ್ಮ ಲಕ್ಷ್ಮಣನೊಡನೆ ಕಾಡಿಗೆ ಹೋದ. ಲಂಕಾಧೀಶನಾದ ಕೇಡಿ ರಾವಣನು ರಾಮನಿಲ್ಲದ ವೇಳೆ ನೋಡಿ ಸೀತೆಯನ್ನು ಸೆರೆಕೊಂಡು ಹೋದ. ರಾಮ ರಾವಣನನ್ನು ಕೊಂದು ಸೀತೆಯನ್ನು ಸೆರೆಯಿಂದ ತಂದ. ಈ ಕಥೆ ಇದರಲ್ಲಿ ತುಂಬುವ ನೋಹರವಾಗಿ ಹೇಳ ಲಾಗಿದೆ. ಸೀತಾರಾಮರ ಜೀವನಮಾರ್ಗ ರಾಜರಿಗೆ ಆದರ್ಶ; ಸಾಮಾನ್ಯ ಮಾನವರಿಗೂ ಆದರ್ಶ. ಅದಕ್ಕಾಗಿ ಸೀತಾರಾಮರನ್ನು ದೇವರ ಅವತಾರ



ರಾಮ ಸೀತೆ ಲಕ್ಷ್ಮಣ ಕಾಡಿನಲ್ಲಿ

ವೆಂದು ನಂಬಿ ಪೂಜಿಸುವಷ್ಟು ನಂಬಿಕೆ ನಮ್ಮ ಜನರಲ್ಲಿ. ಇದು ಆರ್ಯರಿಗೂ ದಕ್ಷಿಣದೇಶದಲ್ಲಿ ಪ್ರಬಲರಾಗಿದ್ದ ದ್ರಾವಿಡರಿಗೂ ನಡೆದ ಯುದ್ಧ ಕುರಿತದ್ದಾಗಿರಬೇಕೆಂದು ಹಲವರ ಊಹೆ.

## ಮಹಾಭಾರತ

ಮಹಾಭಾರತದ ಕಾಲ ಸುಮಾರು ಕ್ರಿ. ಪೂ. ೧೫೦೦ ವರ್ಷಗಳಲ್ಲಿ. ಇದನ್ನು ರಚಿಸಿದವನು ವ್ಯಾಸಮುನಿ. ಇದು ರಾಮಾಯಣದಂತೆ ಒಂದು ರಾಜಮನೆತನದ ಕಥೆಯಷ್ಟೇ ಅಲ್ಲ ಎಲ್ಲಬಗೆಯ ಜನಜೀವನ ಇದರಲ್ಲಿ ಸೊಗಸಾಗಿ ಹೆಣೆಯಲಾಗಿದೆ. ಅದರ ಜೊತೆಗೆ ಸನಾತನ ಧರ್ಮದ ಸಾರವಾಗಿ ಈಗಲೂ ಪ್ರಪಂಚದ ಮೆಚ್ಚುಗೆ ಪಡೆದಿರುವ ಭಗವದ್ಗೀತೆ ಇದರಲ್ಲಿದೆ. ಅದರಿಂದಲೇ ಮಹಾಭಾರತವನ್ನು ಐದನೇ ವೇದವೆಂದು ಹೇಳುತ್ತಾರೆ. ಇದು ಚಂದ್ರವಂಶದ ರಾಜರ ಕಥೆ. ಕೌರವಪಾಂಡವರು ದಾಯಾದಿ



ಕೃಷ್ಣ ಅರ್ಜುನನಿಗೆ ಗೀತೋಪದೇಶ ಮಾಡುತ್ತಿರುವುದು

ಗಳು. ಕೌರವರು ದುರಾಸೆಯಿಂದ ದುರಾಲೋಚನೆ ಹೊಂದಿ ಪಾಂಡವರಿಗೆ ಕಾಟ ಕೊಡುತ್ತಾರೆ. ದ್ಯೂತವ್ಯಾಜ ಒಡ್ಡಿ ಮೋಸಮಾಡಿ ಅವರಿಂದ ರಾಜ್ಯ ಅಪಹರಿಸುತ್ತಾರೆ. ಅಷ್ಟೇ ಅಲ್ಲ, ಅವರನ್ನು ೧೩ ವರ್ಷ ಕಾಡಿಗೆ ಅಟ್ಟುತ್ತಾರೆ. ನಿಯಮದಂತೆ ಅವರು ಹಿಂದಕ್ಕೆ ಬಂದಾಗ ಅವರ ರಾಜ್ಯ ಅವರಿಗೆ ಒಪ್ಪಿಸುವ ಬದಲು ಅವರೊಡನೆ ಯುದ್ಧಕ್ಕೆ ನಿಲ್ಲುತ್ತಾರೆ. ಕುರುಕ್ಷೇತ್ರದಲ್ಲಿ ಯುದ್ಧ. ಕೊನೆಗೆ ಸತ್ಯದ ಜಯ. ಕೌರವರು ಸೋತು ಹಾಳಾಗುತ್ತಾರೆ. ೧೮ ಅಕ್ಷೋಹಿಣಿ ಜನರು ಕೊಲೆಯಾಗಿ ದೇಶದಲ್ಲಿ ಸಂಕಟ ಬೇನೆ ತಾಂಡವವಾಡುತ್ತಿದ್ದಾಗ ಪಾಂಡವರು

ಗೆದ್ದರೂ ಸುಖಿಯಾಗಲಿಲ್ಲ. ಇದೆಲ್ಲ ನಡೆಯಲೇಬೇಕಾಗಿದ್ದುದು ಎಂಬುದು ಆ ಗ್ರಂಥದ ಸಾರ. ಈ ಕಥೆಯಲ್ಲಿ ದ್ವಾರಕಿಯ ಕೃಷ್ಣನ ಪಾತ್ರ ದೊಡ್ಡದು. ಸತ್ಯ ಶಾಶ್ವತವಾದುದು, ಸಹಜವಾದುದು ಎಂಬುದನ್ನು ತೋರಿಸಲು ಅವನು ಮಹಾಭಾರತಕಥೆಯ ಸುರಳಿಯನ್ನು ನಿರ್ಮಿಸಿ ಗೀತಾಚಾರ್ಯನಾಗಿ ಜಯ ಗಳಿಸುತ್ತಾನೆ. ಅದಕ್ಕಾಗಿ ಅವನು ಪರಮಾತ್ಮನೆಂದೂ ದೇವರ ಅವತಾರವೆಂದೂ ಪೂಜೆಗೊಳ್ಳುತ್ತಾನೆ.

ಈ ಗತಿಯಲ್ಲಿ ಭಾರತದ ಕಥೆಯು ಬೆಳೆದು ಬಂತು. ಹೀಗೆ ಐಹಿಕ ಮತ್ತು ತಾತ್ವಿಕ ದೃಷ್ಟಿಯಲ್ಲಿ ಭಾರತಭೂಮಿ ದಿವ್ಯ ರೀತಿಯಲ್ಲಿ ಮಹತ್ತನ್ನು ಕಂಡಿತು. ಈ ಬಗೆಯಲ್ಲಿ ಸಂಸ್ಕೃತವಾದ ದೇಶ ಆಗ ಚೀಣವನ್ನು ಬಿಟ್ಟರೆ ಮತ್ತೊಂದಿರಲಿಲ್ಲ. ಆಮೇಲೆ ಗ್ರೀಸ್ ದೇಶವೂ ಕೊಂಚ ಕಾಲದಲ್ಲೇ ಅದ್ಭುತವಾದ ಅಭಿವೃದ್ಧಿಯನ್ನು ಕಂಡಿತು.

### ಚೀನಾ

ಚೀನಾ ವಿಷಯ ತಿಳಿದು ಆಮೇಲೆ ಗ್ರೀಸಿನ ವಿಷಯ ತಿಳಿಯಲು ಹೊರಡೋಣ. ಹಿಮಾಲಯದ ಆಚೆ ಟಿಬೆಟ್ ಪ್ರಸ್ಥಭೂಮಿಯ ಪಕ್ಕದಲ್ಲಿ



ಈಶಾನ್ಯಕ್ಕೆ ವಿಸ್ತಾರವಾದ ಭೂಮಿ ಚೀನಾ ದೇಶ. ಈ ದೇಶದಲ್ಲಿ ಯಾಂಗ್ಟಿಸಿಕಿಯಾಂಗ್, ಹೊಯಾಂಗ್ಹೋ ಮಹಾನದಿಗಳು ಹರಿಯುತ್ತವೆ. ಈ ದೇಶ ಈಜಿಪ್ಟ್, ಇಂಡಿಯಾ ದೇಶಗಳಂತೆ ಬಹಳ ಹಿಂದೆಯೇ ಸುಸಂಸ್ಕೃತವಾಗಿತ್ತು. ಇಲ್ಲಿಯ ಜನರು ಮೊದಲಿನಿಂದಲೂ ಶಾಂತಿಪ್ರಿಯರು. ಇಲ್ಲಿಯೂ ಕೃಷಿಯೇ ಮುಖ್ಯ ಕಸಬು. ಮೊದಮೊದಲು ದೇಶ ಪಾಳೆಯಪಟ್ಟುಗಳಿಂದ ತುಂಬಿಹೋಗಿತ್ತು. ಇದು, ಸಮಕಾಲೀನವಾದ ಈಜಿಪ್ಟ್, ಬ್ಯಾಬಿಲೋನ್ ದೇಶಗಳೊಡನೆ, ವ್ಯಾಪಾರ ವ್ಯವಹಾರ



ಸಂಬಂಧ ಹೊಂದದಿದ್ದರೂ ಭಾರತದೇಶದ ಸಂಬಂಧವಿಟ್ಟದ್ದಂತೆ ಕಾಣುತ್ತದೆ. ಇಲ್ಲಿಯ ಸಂಸ್ಕೃತಿ ಮಿಕ್ಕಾವ ಸಂಸ್ಕೃತಿಯ ಪ್ರಭಾವಕ್ಕೂ ಸಿಕ್ಕದೆ ತನ್ನದೇ ಆದ ದಾರಿಯಲ್ಲಿ ವೈಭವಯುತ ವಾಗಿಯೇ ಬೆಳೆದಿತ್ತು. ತತ್ವಶಾಸ್ತ್ರವನ್ನೂ ಚೀನೀ ಯರು ಆರ್ಯರಂತೆ ಅದ್ಭುತ ರೀತಿಯಲ್ಲಿ ಬೆಳೆಸಿ ಕೊಂಡಿದ್ದರು. ಅಲ್ಲಿಯ ಪುರಾಣಗಳೂ ರಚನೆ ಗೊಂಡಿದ್ದವು. ಚೀನೀಯರೆ ಮೊದಲು ಅಮೆರಿಕಾ ಖಂಡ ಕಂಡುಹಿಡಿದಿರಬೇಕು. ಅಲ್ಲಿನ ಮಾಯಾ ಸಂಸ್ಕೃತಿ ಚೀನಾದ ಪ್ರಭಾವ ಪಡೆದುದಾಗಿರಬೇಕೆಂದು ಊಹಿಸಲು ಆಧಾರವಿದೆ. ಅವರು ಮೊದಲಿಂದಲೂ ಹಡಗು ವ್ಯಾಪಾರ ಮಾಡು ತ್ತಿದ್ದರು. ಶಾಂತಿಸಾಗರದ ತೀರಪ್ರದೇಶಗಳೆಲ್ಲ ಅವರ ಸ್ವಾಸ್ಥ್ಯಗಳಾದವು.

ಚೀನೀಯರು ಮೊದಲೆ ಕುಶಲಕಲೆಯಲ್ಲಿ ಚತುರರಾಗಿದ್ದರು. ರೇಷ್ಮೆ ತಯಾರಿ ನಡೆಯುತ್ತಿತ್ತು. ಪಿಂಗಾಣಿ ಸಾಮಾನೆಂದರೆ ಆಗಲೂ ಚೀನದ ಹೆಸರೆ.

ರಾಜಕೀಯದಲ್ಲಿ ಚೀನ ಮುಂದರಿದಿತ್ತು. ಕ್ರಿ. ಪೂ. ೨೦೦೦ ದ ಹೊತ್ತಿಗೆ ಆಗಲೆ ಸಾಮ್ರಾಜ್ಯ ಸ್ಥಾಪನೆಯಾಗಿ ಹೋಗಿತ್ತು. ಅಲ್ಲಿ ಸಾರ್ವಭೌಮರಾಗಿದ್ದ ರಾಜಸಂತತಿಯಲ್ಲಿ ಚೌ ಸಂತತಿಯವರೇ ಮುಖ್ಯ ರಾದವರು. ಅವರು ಕ್ರಿ. ಪೂ. ೧೧೨೨ ರಿಂದ ೮೦೦ ವರ್ಷಗಳ ಕಾಲ ಒಂದೇಸಮನೆ ಚಕ್ರಾಧಿಪತ್ಯ ನಡೆಸಿದರು. ಅವರ ಕಾಲದಲ್ಲಿ ಸಾಹಿತ್ಯ ಕಲೆ ನೂರ್ಮಡಿಯಾಗಿ ಬೆಳೆಯಿತು. ಚೀನೀಯರಿಗೆ ಅವರದೇ ಲಿಪಿಯಿತ್ತು. ಆ ಲಿಪಿಯೊಂದೊಂದೂ ಒಂದೊಂದು ಚಿತ್ರವಿದ್ದಂತೆ ಕಲಾಮಯ.

ಆದರೆ ಕ್ರಿ. ಪೂ. ೬ನೆ ಶತಮಾನದ ಕಾಲದಲ್ಲಿ ಚೀನಾದಲ್ಲಿ ಅನಾಯಕತೆ ಕಾಣಿಸಿಕೊಂಡು ತುಂಬಾ ಅವ್ಯವಸ್ಥೆಯಾಯಿತು. ಚಕ್ರಾಧಿ

ಪತ್ಯ ಚೂರುಚೂರಾಯಿತು ಮತ್ತು ಪಾಳೆಯಪಟ್ಟುಗಳು ಕಾಣಿಸಿಕೊಂಡವು. ಕೊನೆಗೆ ಕ್ರಿ. ಪೂ. ೫೫೬ ರಲ್ಲಿ ಸ್ವರ್ಗಪುತ್ರ ಎಂಬವನ ಸಾವಿನಿಂದ ಚೌ ಸಂತತಿ ಕೊನೆಗೊಂಡಿತು. ಮತ್ತೆ ಪಾಳೆಯಪಟ್ಟುಗಳು ಕೊನೆಗೊಂಡು ಸಂಯುಕ್ತರಾಜ್ಯಾಂಗ ಪ್ರಾರಂಭವಾಯಿತು.

## ಗ್ರೀಸ್

ಈ ಅಧ್ಯಾಯವನ್ನು ಮುಗಿಸುವ ಮೊದಲು ಗ್ರೀಸು ಮತ್ತು ರೋಮ್ ದೇಶಗಳ ವಿಷಯ ತಿಳಿಯುವುದು ಅವಶ್ಯ. ಗ್ರೀಸ್ ದೇಶದ



ಗ್ರೀಸಿನ ಪುರಾತನ ದೇವಾಲಯ ಒಂದು

ಇತಿಹಾಸ ಪ್ರಪಂಚದಲ್ಲಿ ಅಸಮಾನವಾದ ರಾಜ್ಯಾಡಳಿತ ಮತ್ತು ಜ್ಞಾನ ಬೆಳವಣಿಗೆಯನ್ನು ಹೇಳುತ್ತದೆ. ಇದು ಭೂಮಧ್ಯ ಸಮುದ್ರದಲ್ಲಿರುವ ಒಂದು ದ್ವೀಪ. ಇದರ ಹವಾಗುಣ ವಿಚಿತ್ರವಾದುದು. ಎರಡು ಅಕ್ಷಾಂಶಗಳೊಳಗೇ ಇದ್ದರೂ ಬೆಳಗ್ಗೆ ಮೈಯ್ಯನ್ನು ನಡುಗಿಸುವ ಚಳಿ, ಮಧ್ಯಾಹ್ನ ತಾಳಲಾರದ

ಸೆಕೆ. ಗ್ರೀಸ್ ದ್ವೀಪದ ತುಂಬ ಬೆಟ್ಟ ಗುಡ್ಡಗಳ ಸಾಲುಗಳು. ಅದರಿಂದ ಅದು ಹಲವು ಬೇರೆ ಬೇರೆ ಪ್ರದೇಶಗಳಾಗಿ ವಿಂಗಡಿಸಿದಂತಿದೆ. ಈ ಪ್ರತಿಯೊಂದು ಪ್ರದೇಶದಲ್ಲೂ ಒಂದೊಂದು ರಾಜ್ಯ ಹುಟ್ಟಿಕೊಂಡು ಸ್ವಾಭಾವಿಕವಾಗಿದ್ದ ಬೆಟ್ಟಗುಡ್ಡಗಳ ಕೋಟೆಯ ರಕ್ಷಣೆಯಿಂದ ಅಭಿವೃದ್ಧಿ ಹೊಂದಿದ್ದವು. ಈ ಎಲ್ಲ ರಾಜ್ಯಗಳೂ ಏಕಪ್ರಕಾರ ಸಂಪದಭಿವೃದ್ಧಿಯ ಮಟ್ಟವನ್ನು ಗಳಿಸಿದ್ದವು.


ಜ್ಯೂಸ್

ಗ್ರೀಸ್ ದೇಶ ರಾಜಕೀಯವಾಗಿ ಎಷ್ಟೆ ಭಾಗವಾಗಿದ್ದರೂ ಗ್ರೀಕ್ ಜನರೆಲ್ಲ ಒಂದೇ ಜನಾಂಗದವರೆಂದು ಭಾವಿಸಲು ಅವರ ಧರ್ಮದ ಪ್ರಭಾವ ತುಂಬ. ಗ್ರೀಕರು ದೇವ, ದೇವತೆಗಳ ಗುಂಪನ್ನೇ ಪೂಜಿಸುತ್ತಿದ್ದರು. ಒಬ್ಬೊಬ್ಬ ದೇವತೆ ಅಥವಾ ದೇವನಿಗೂ ಒಂದೊಂದು ಕಾರ್ಯದ ಜವಾಬ್ದಾರಿ. ಈ ಎಲ್ಲ ದೇವರಿಗೂ ಮೇಲಾದ ಎಲ್ಲ ದೇವ

ಸಮೂಹಕ್ಕೂ ಮಾನವರಿಗೂ ತಂದೆಯೆಂದು ಜ್ಯೂಸ್ ಎಂಬ ದೇವರೊಬ್ಬ ನಿದ್ದ. ಈ ದೇವತೆಗಳೆಲ್ಲ ಮಾನವರಂತೆ ಕೋಪತಾಪಗಳಿಗೆ ಒಳಗಾಗುತ್ತಿದ್ದರೂ ಅಮರರಾಗಿದ್ದುಕೊಂಡು ಸರಿಯಾದುದಕ್ಕೇ ತಮ್ಮ ಸಹಾಯ ಮಾಡುವರೆಂದು ಗ್ರೀಕರು ಭಾವಿಸಿದ್ದರು. ಈ ವಾತಾವರಣದಲ್ಲಿ ಬೆಳೆದ ಈ ದೇಶದ ಜನರು ಅತ್ಯಾಶ್ಚರ್ಯಕರವಾಗಿ ಅಭಿವೃದ್ಧಿಗೆ ಬಂದರು. ರಾಜಕಾರಣದಲ್ಲಿ ಅಸಮಾನವಾದ ಒಂದು ವ್ಯವಸ್ಥೆ ತೋರಿಸಿದರು. ತತ್ವಶಾಸ್ತ್ರದಲ್ಲೂ ಅಷ್ಟೇ ಅಗಾಧವಾಗಿ ಚಾತುರ್ಯ ತೋರಿದರು. ಈಗಲೂ ಪಾಶ್ಚಾತ್ಯ ದೇಶಗಳ ನಾಗರೀಕತೆ, ರಾಜಕೀಯ ವ್ಯವಸ್ಥೆಗಳೆಲ್ಲ ಗ್ರೀಸಿನಿಂದ ಕಲಿತವು.

ನಾವು ಭೂಪಟ ನೋಡಿದರೆ ಯೂರೋಪಿನ ಇತರ ದೇಶಗಳಿಗಿಂತ ಗ್ರೀಸು ಅದ್ಭುತ ರೀತಿಯಲ್ಲಿ ಸಂಸ್ಕೃತಿ ಹೊಂದಿದ್ದಕ್ಕೆ ಕಾರಣ ಗೊತ್ತಾಗದಿರದು. ಇದರ ಅಭಿವೃದ್ಧಿ ಕ್ರಿ. ಪೂ. ೧೭ ನೆ ಶತಮಾನದ ಸುಮಾರಿನಲ್ಲಿ ಪ್ರಾರಂಭವಾಯಿತು. ಇಷ್ಟರಲ್ಲಾಗಲೆ ಇತರ ಸುತ್ತಮುತ್ತಲಿನ ದೇಶಗಳಾದ ಕ್ರೀಟ್ ಮೆಸಪೊಟೋಮಿಯ ಈಜಿಪ್ಟ್‌ಗಳ ಸಂಸ್ಕೃತಿಗಳು ಮೇಲ್ಮಟ್ಟದಲ್ಲಿದ್ದವು. ಬೆಟ್ಟದ ಸಾಲು ಗ್ರೀಸನ್ನು ಅದು ಅಂಟಿಕೊಂಡಿದ್ದ ಇತರ ಯೂರೋಪಿನ ಪ್ರಾಂತಗಳಿಂದ ಬೇರೆ ಮಾಡಿತ್ತು. ಅದರಿಂದ ಅದು ಸ್ವಾಭಾವಿಕವಾಗಿ ಏಷ್ಯದ ದೇಶಗಳ ಸಂಬಂಧವನ್ನೇ ಬೆಳಸಬೇಕಾಯಿತು. ಜೊತೆಗೆ ಗ್ರೀಸಿನ ಸಮುದ್ರತೀರದಲ್ಲಿ ಅನುಕೂಲವಾದ ಬಂದರುಗಳಿದ್ದು ನಾವೆಯ ಪ್ರಯಾಣಕ್ಕೆ ಸೌಲಭ್ಯ ತುಂಬಿತ್ತು. ಅದರಿಂದ ಹಲವು ವಿಧದ ವ್ಯಾಪಾರ ಅಭಿವೃದ್ಧಿ ಹೊಂದಿತು.

ಕ್ರೀಟ್ ರಾಜಧಾನಿಯಾದ ನಾಸಸ್‌ನಂತೆಯೇ ಗ್ರೀಸಿನಲ್ಲಿ ಮೈಸೆನೀ ಮತ್ತು ಟೆರಿನ್ ಪಟ್ಟಣಗಳು ಕ್ರಿ. ಪೂ. ೧೬೦೦ ರಲ್ಲಿಯೇ ಸಂಪತ್ಸಮೃದ್ಧಿಯಿಂದ ಕೂಡಿದ್ದವು. ಇವಕ್ಕೆ ಸಮನಾಗಿದ್ದ ಇನ್ನೊಂದು ಪಟ್ಟಣವೆಂದರೆ ಏಷಿಯಾ ಮೈನರ್‌ನಲ್ಲಿದ್ದ ಟ್ರಾಯ್. ಗ್ರೀಸ್ ದ್ವೀಪದಲ್ಲಿ ಹೀಗೆ ಅಭಿವೃದ್ಧಿಗೆ ಬಂದಿದ್ದ ಜನರನ್ನು ಏಜಿಯನ್ನರು ಅಥವಾ ಹೆಲೆನರು ಎಂದು ಕರೆಯುತ್ತಾರೆ. ಇವರೂ ಆರ್ಯರ ಗುಂಪಿಗೆ ಸೇರಿದವರೇ. ಈ ಹೆಲನರು

ಸಾಹಸಪ್ರಿಯರು. ಗ್ರೀಸ್ ದ್ವೀಪದಲ್ಲೆಲ್ಲ ತಮ್ಮ ಪ್ರಭಾವವನ್ನು ಬೀರಿದರು. ಇವರೇ ಕ್ರೀಟ್‌ಮೇಲೆ ಧಾಳಿ ನಡೆಸಿ ನಾಸಸ್ ನಗರವನ್ನು ಹಾಳುಮಾಡಿ ಆ ಸಂಸ್ಕೃತಿ ಮತ್ತೆ ತಲೆ ಎತ್ತದಂತೆ ಮಾಡಿದವರು. ಏಷಿಯ ಮೈನರಿನ ಟ್ರಾಯ್ ದೇಶದಮೇಲೂ ದಂಡೆತ್ತಿಹೋಗಿ ಅದನ್ನು ಹಾಳುಮಾಡಿದರು. ಆ ಗೆಲವಿನಲ್ಲಿ ಗ್ರೀಸರು ತುಂಬ ಹೆಮ್ಮೆಪಡುತ್ತಿದ್ದರು. ಭಾರತದಲ್ಲಿ ಆರ್ಯರು ರಚಿಸಿದ ಮಹಾಕಾವ್ಯಗಳಂತೆಯೇ ಗ್ರೀಕರಿಗೂ ಈ ಮಹಾಕಾವ್ಯಗಳಿವೆ. ಗ್ರೀಸಿನ ಮಹಾಕಾವ್ಯಗಳೆಂದರೆ ಇಲಿಯಡ್ ಮತ್ತು ಒಡಿಸ್ಸೆ. ಈ ಎರಡು ಮಹಾಕಾವ್ಯಗಳನ್ನೂ ಕುರುಡು ಮಹಾಕವಿ ಹೋಮರನು ಮನೋಹರ ವಾಗಿ ಹಾಡಿದನು. ಇಲಿಯಡ್ ಕಾವ್ಯವು ಗ್ರೀಸಿನ ಸಂಯುಕ್ತ ಸೇನೆಗೂ ಏಷ್ಯ ಮೈನರಿನ ಟ್ರಾಯ್ ದೇಶಕ್ಕೂ ನಡೆದ ಕಥೆ.

## ಟ್ರೋಜನ್ ಯುದ್ಧ

ಗ್ರೀಸಿನ ಮೈಸೇನಿದೇಶದ ರಾಜನಾದ ಮೆನ್ಲಾಸ್‌ನ ಹೆಂಡತಿ ಹೆಲನಳನ್ನು ಟ್ರಾಯ್ ರಾಜಕುಮಾರ ಪ್ಯಾರಿಸ್ ಓಡಿಸಿಕೊಂಡು ಹೋಗುತ್ತಾನೆ. ತಮ್ಮ ದೇಶಕ್ಕಾದ ಈ ಅವಮಾನವನ್ನು ಸಹಿಸದ ಅಭಿಮಾನಿಗಳಾದ ಗ್ರೀಸಿನ ರಾಜರು ಒಗ್ಗಟ್ಟಿನಿಂದ ಟ್ರಾಯ್ ಪಟ್ಟಣ ವನ್ನು ಮುತ್ತುತ್ತಾರೆ. ಕೊನೆಗೆ ಗೆದ್ದು ಆ ಪಟ್ಟಣವನ್ನು ಹಾಳುಮಾಡು ತ್ತಾರೆ. ಇದು ಇಲಿಯಡ್ ಕಾವ್ಯದ ಕಥೆ. ಒಡಿಸ್ಸೆ ಕಾವ್ಯದಲ್ಲಿ ಗ್ರೀಕರ ನಾಯಕನಾದ ಒಡಿಸ್ಸನು ಯುದ್ಧ ಮುಗಿದಮೇಲೆ ಟ್ರಾಯ್ ಪಟ್ಟಣದಿಂದ ತನ್ನ ನಾಡಿಗೆ ಹಿಂತಿರುಗಿದ ಸಾಹಸಯುತವಾದ ಪ್ರಯಾಣವನ್ನು ಸ್ವಾರಸ್ಯವಾದ ರೀತಿಯಲ್ಲಿ ಹೇಳಿದೆ. ಈ ಕಾವ್ಯಗಳಿಂದ ಗ್ರೀಕರ ಸಂಸ್ಕೃತಿಯ ಮಟ್ಟ ಸ್ಪಷ್ಟಗೊಳ್ಳುತ್ತದೆ.

## ಗ್ರೀಕ್ ಸಂಸ್ಕೃತಿ

ಕ್ರಿ. ಪೂ. ೧೦೦೦ ದ ಸುಮಾರಿನಲ್ಲಿ ಆರ್ಯಶಾಖೆಯ ಡೋರಿಯನ್ ಗುಂಪಿನ ಜನರು ಬಂದು ಹೆಲನರನ್ನು ಸೋಲಿಸಿ ಗ್ರೀಸನ್ನು ಗೆದ್ದರು.



ಚಿನ್ನದ ನಗರವೆನಿಸಿಕೊಂಡಿದ್ದ ಸಂಪತ್ಸಮೃದ್ಧಿಯಿಂದ ಕೂಡಿದ್ದ ಮೈಸೆನಿ ಮತ್ತು ಟಿರ್ಣಿ ಪಟ್ಟಣಗಳನ್ನು ಧ್ವಂಸಮಾಡಿದರು. ಆಮೇಲೆ ಸುಮಾರು ಎರಡು ಶತಮಾನ ಗ್ರೀಸ್ ದೇಶ ಅವನತಿಸ್ಥಿತಿಯಲ್ಲಿ ಇತ್ತು. ಆದರೆ ಮತ್ತೆ ಗ್ರೀಕರಿಗೆ ತಮ್ಮ ಹಿರಿಯರ ವೈಭವ ಜ್ಞಾಪಕಕ್ಕೆ ಬಂದು ಮತ್ತೆ ಅವರು ಮುಂದಡಿ ಇಟ್ಟರು. ಆಗಂತೂ ಗ್ರೀಕ್ ಹಿಂದೆ ಕಾಣದ ಮಹಾ ಸಂಸ್ಕೃತಿಯ ದಾರಿ ಹಿಡಿಯಿತು.

ಗ್ರೀಸಿನಲ್ಲಿ ಹೇಗೆ ಹಲವು ಸಂಸ್ಥಾನಗಳು ಹುಟ್ಟಿಕೊಂಡಿದ್ದವು ಎಂಬುದನ್ನು ಹಿಂದೆ ತಿಳಿಸಿದೆ. ಈ ಸಂಸ್ಥಾನಗಳಲ್ಲಿ ಪ್ರತಿಯೊಂದರಲ್ಲೂ ತನ್ನದೇ ಆದ ರಾಜಕೀಯ ವ್ಯವಸ್ಥೆಯೊಂದಿತ್ತು. ಪ್ರತಿಯೊಂದೂ ಆಯಾ ಸಂಸ್ಥಾನದ ಒಳಗಣ ಪರಿಸ್ಥಿತಿಯನ್ನನುಸರಿಸಿದ್ದುದರಿಂದ ಉಳಿದವುಗಳಿಗಿಂತ ಒಂದಲ್ಲ ಒಂದು ರೀತಿಯಲ್ಲಿ ಸ್ವಲ್ಪಮಟ್ಟಿಗೆ ಭಿನ್ನವಾಗಿತ್ತು.

ತನ್ನ ಅಭಿವೃದ್ಧಿ ಮತ್ತು ಸ್ವಾತಂತ್ರ್ಯ ಜನತೆಯ ಅಭಿವೃದ್ಧಿ ಮತ್ತು ಸ್ವಾತಂತ್ರ್ಯದಿಂದ ಬೇರೆ ಎಂದೆಣಿಸಿ ಅದರ ಸಾಧನೆಗಾಗಿ ವ್ಯಕ್ತಿ ಸಾಮಾನ್ಯವಾಗಿ ಜನತೆಯಿಂದ ದೂರವಾಗುತ್ತಾನೆ. ಸಂಕುಚಿತ ಮನೋಭಾವ ಹೊಂದುತ್ತಾನೆ. ವ್ಯಕ್ತಿಗಳಂತೆ ರಾಷ್ಟ್ರಗಳೂ ಹೀಗೆ ಇತರ ಪ್ರಪಂಚದಿಂದ ದೂರಹೋದಾಗ ಸಂಕುಚಿತ ಭಾವನೆ ಹೊಂದುತ್ತವೆ. ಆದರೆ ಗ್ರೀಸ್ ರಾಜ್ಯಗಳು ಹೀಗಿರಲಿಲ್ಲ. ಎಲ್ಲಾ ಸಂಸ್ಥಾನಗಳದು ಒಂದೇ ಭಾಷೆ; ಎಲ್ಲ ಒಂದೇ ದೇವತೆಗಳನ್ನು ಪೂಜಿಸುತ್ತಿದ್ದುವು. ಕೆಲವು ಸಮಾರಂಭಗಳಲ್ಲಿ ಎಲ್ಲ ಸಂಸ್ಥಾನಗಳವರೂ ಒಂದೇ ರಾಷ್ಟ್ರದವರಂತೆ ಒಟ್ಟಿಗೆ ಕಳೆಯುತ್ತಿದ್ದರು.

ಈ ಸಮಾರಂಭಗಳಲ್ಲಿ ಆಡಿ, ಹಾಡಿ, ಕುಣಿದು ಸುಖ ಸಂತೋಷಗಳನ್ನನುಭವಿಸುತ್ತಿದ್ದರು. ಇದಕ್ಕಾಗಿ ಸೇರುತ್ತಿದ್ದ ಪ್ರದೇಶ ಕಾಲಕ್ರಮದಲ್ಲಿ ಡೆಲ್ಫಿಯೆಂಬ ಪ್ರಸಿದ್ಧವಾದ ಭವಿಷ್ಯ ನುಡಿಯುವ ಪ್ರದೇಶವಾಯಿತು. ಆ ಆಟ ಪಾಟಗಳು ಒಲಿಂಪಿಯನ್ ಆಟಗಳಾಗಿ ಅಭಿವೃದ್ಧಿಗೊಂಡವು. ಆ ದೊಡ್ಡ ಜಾತ್ರೆಗೆ ಗ್ರೀಕರು ನಾಡಿನ ಎಲ್ಲ ಕಡೆಗಳಿಂದಲೂ ಬಂದು ಸೇರುತ್ತಿದ್ದರು. ರಥಗಳ ಸ್ಪರ್ಧೆಯನ್ನು ಆಚರಣೆಗೆ ತಂದಾಗ ಸಂಸ್ಥಾನದಿಂದ ಸಂಸ್ಥಾನಕ್ಕೆ ಒಳ್ಳೆಯ ರಸ್ತೆಗಳನ್ನೂ ಮಾಡಿಸಬೇಕಾಯಿತು. ನದಿಗಳಿಗೆ ಸೇತುವೆಗಳನ್ನು ಕಟ್ಟಿಸಬೇಕಾಯಿತು.

## ವಸಾಹತು

ಗ್ರೀಸಿನ ಭೂಮಿ ಅಷ್ಟು ಫಲವತ್ತಾದುದಲ್ಲ. ಜೊತೆಗೆ ಶ್ರೀಮಂತರ ಹಿಡುವಳಿ. ಹೀಗಾದುದರಿಂದ ಗ್ರೀಸಿನ ಜನತೆ ಸಮಾಧಾನಗೆಟ್ಟಿತು. ಇದು ಅರಿತ ಸರಕಾರಗಳು ವಸಾಹತುಗಳ ಸ್ಥಾಪನೆಗೆ ಪ್ರಾರಂಭಿಸಿದವು. ಜನರು ಏಷಿಯಾ ಮೈನರ್, ಸಿಸಿಲಿ, ಸೈಪ್ರಸ್ ಮತ್ತು ಕಾರ್ಸಿಕ ಈ ಭೂಭಾಗಕ್ಕೆ ವಲಸೆ ಹೋಗಿ ಹೊಸಹೊಸ ಸ್ವಾಸ್ಥ್ಯಗಳನ್ನು ಸ್ಥಾಪಿಸಿದರು. ಈ ವ್ಯವಸ್ಥೆಗೊಂಡ ವಲಸೆ ಕ್ರಿ. ಪೂ. ೮ ನೆ ಶತಮಾನದ ಮಧ್ಯಭಾಗದಿಂದ ೬ ನೆ ಶತಮಾನದ ಮಧ್ಯದವರೆಗೂ ನಡೆಯಿತು. ಹೀಗೆ ಸ್ಥಾಪಿತವಾದ ಸ್ವಾಸ್ಥ್ಯಗಳು ಮೊದಲಿಂದಲೂ ಸ್ವತಂತ್ರವಾಗಿಯೇ ಬಾಳಿದವು.

ಗ್ರೀಕರು ಹೆಜ್ಜೆಯಿಟ್ಟ ಕಡೆ ವಸಾಹತುಗಳನ್ನು ಸ್ಥಾಪಿಸಿದರು. ಅಲ್ಲೆಲ್ಲ ಗ್ರೀಕರ ಪಟ್ಟಣಗಳು ಸಮೃದ್ಧಿಗೂಡಿ ಬೆಳೆದವು. ಈ ಪಟ್ಟಣಗಳು ಅಮೃತಶಿಲೆಗಳ ಸೌಧಗಳಿಂದ ಕಂಗೊಳಿಸುತ್ತಿದ್ದವು. ಇವುಗಳನ್ನು ಮನಮೋಹಕವಾದ ರೀತಿಯಲ್ಲಿ ಕಟ್ಟಿದ್ದರು. ಅವುಗಳ ಮುಂದೆ ಆಳವಾದ ಶಾಂತವಾದ ಬಂದರುಗಳೂ, ಅವುಗಳ ಹಿಂದೆ ಗುಲಾಬಿಬಣ್ಣದ ಕಣಿವೆಗಳೂ ಪೊದರುಗಳೂ ತೂಗಾಡುತ್ತಿದ್ದ ಸಸ್ಯಗಳಿಂದ ತುಂಬಿದ್ದ ದೊಡ್ಡ ಸರೋವರಗಳೂ ಕಂಗೊಳಿಸುತ್ತಿದ್ದವು. ಪ್ರತಿಯೊಂದು ಸ್ವಾಸ್ಥ್ಯವೂ

ಸ್ವತಂತ್ರವಾಗಿದ್ದರೂ ಕೂಡ ಅದು ತನ್ನ ತಾಯ್ನಾಡಿನಲ್ಲಿ ಭಕ್ತಿಯಿಟ್ಟಿತ್ತು. ಜನರು ತಾವು ಗ್ರೀಕರೆಂಬ ಹೆಮ್ಮೆಹೊಂದಿದ್ದರು ಗ್ರೀಸ್ ದೇಶವೆಂಬ ಭಾವನೆಗಿಂತಲೂ ಗ್ರೀಕ್ ಜನಾಂಗವೆಂಬ ಅಭಿಮಾನ ಅವರಲ್ಲಿ ತುಂಬಿತ್ತು. ಗ್ರೀಕ್ ಭಾಷೆಯನ್ನೆಲ್ಲೆಲ್ಲಿ ಆಡುತ್ತಿದ್ದರೋ ಅದೆಲ್ಲವೂ ಗ್ರೀಸರದೇ ಆಗಿತ್ತು. ಅವರೆಲ್ಲರಿಗೂ ಇದ್ದುದು ಒಂದೇ ಧರ್ಮ. ಹೋಮರ್ ಕವಿಯು ಹಾಡಿದ ಟ್ರಾಯ್ ಪಟ್ಟಣದ ಧಾಳಿಯಲ್ಲಿ ಗ್ರೀಕ್ ಯೋಧರ ಐಕ್ಯತೆಯ ಹಾಡು ಅವರ ಹೃದಯ ತಂತಿಯನ್ನು ಮೀಟುತ್ತಿತ್ತು. ಜೊತೆಗೆ ಕ್ರಿಮಿಯದಿಂದ ಹಿಡಿದು ಮಾರ್ಸೇಲ್ಸ್‌ವರೆಗ ಯಾವ ಪ್ರದೇಶದಲ್ಲಿ ಆಗಲಿ ಇದ್ದ ಯಾವ ಗ್ರೀಕನಾದರೂ ಸ್ಪಾರ್ಟಾ ಅಥವಾ ಅಥೆನ್ಸಿನ ನಿವಾಸಿಗಿದ್ದ ಎಲ್ಲ ಹಕ್ಕುಗಳಿಂದಲೂ ಕೂಡಿ ಒಲಿಂಪಿಯನ್ ಆಟಗಳಲ್ಲಿ ಸ್ಪರ್ಧಿಸಬಹುದಿತ್ತು. ಈ ಹಕ್ಕು ಇತರ ಯಾವ ದೊಡ್ಡ ರಾಜನೂ ಎಷ್ಟೇ ಪ್ರಯತ್ನಪಟ್ಟರೂ ಸಾಧಿಸಲಾಗುತ್ತಿರಲಿಲ್ಲ. ಒಲಂಪಿಯನ್ ಆಟಗಳು ಪ್ರೇರಿಸಿದ ಅದ್ಭುತ ಉತ್ಸಾಹವೇ ಗ್ರೀಸಿನ ಪ್ರಸಿದ್ಧವಾದ ಅಭಿವೃದ್ಧಿಗೆ ಮುಖ್ಯಕಾರಣವಾಯಿತು. ಆ ಪ್ರಸಿದ್ಧವಾದ ಸ್ಪರ್ಧೆಯಲ್ಲಿ 'ವಿಜಯೀ ಆಲಿವ್ ಮಾಲೆ' ಯನ್ನು ಗೆದ್ದ ವೀರನು ಅಲ್ಲಿಂದ ಮುಂದೆ ಎಂದೆಂದಿಗೂ ಪ್ರಸಿದ್ಧನಾಗಿರುತ್ತಿದ್ದನು. ಮಹಾಜನಗಳಿಗೆ ಸೇರಿದ ಡೆಲ್ಫಿಯ ಮಂದಿರದಲ್ಲಿ ಅವನ ಪ್ರತಿಮೆಯನ್ನು ಕೆತ್ತಿ ನಿಲ್ಲಿಸುತ್ತಿದ್ದರು. ಸಾಮಾನ್ಯವಾದ ವಿಜಯಕ್ಕೆ ಸಲ್ಲಿಸುವ ಎಲ್ಲ ಗೌರವಗಳಿಂದಲೂ ಅವನನ್ನು ಅವನ ಸ್ವಂತ ನಾಡಿನಲ್ಲಿ ಸ್ವಾಗತಿಸುತ್ತಿದ್ದರು. ಐದು ವರ್ಷಗಳವರೆಗೆ ಗ್ರೀಸಿನಲ್ಲಿ ಎಲ್ಲಿ ಹೋದರೂ ಆ ವೀರನ ಪಟ್ಟಣದ ವಿಚಾರವಾಗಿಯೇ ಮಾತುಕತೆ ನಡೆಯುತ್ತಿತ್ತು. ಅದರ ನಿವಾಸಿಗಳು ಎಲ್ಲಿ ಹೋಗಲಿ ಅವರನ್ನು ಬಾಯಿತುಂಬ ಹೊಗಳಿ ಗೌರವದಿಂದ ಸ್ವಾಗತಿಸುತ್ತಿದ್ದರು.

ಈ ರೀತಿಯಲ್ಲಿ ಸ್ಪರ್ಧಾಭಾವನೆಯನ್ನು ಬೆಳೆಸಿಕೊಂಡಿದ್ದ ಗ್ರೀಕರ ಪ್ರತಿಯೊಂದು ಪಟ್ಟಣದಲ್ಲಿಯೂ ಒಂದೊಂದು ಗರಡಿ ಏರ್ಪಟ್ಟು ಅಲ್ಲಿ ಯುವಕರು ತಂಡತಂಡದಲ್ಲಿ ವ್ಯಾಯಾಮ ಮಾಡುತ್ತಿದ್ದರು.

ಖಗೋಳಶಾಸ್ತ್ರವನ್ನು ವಿಜ್ಞಾನ ದೃಷ್ಟಿಯಿಂದ ಸರಿಗೂಡಿಸಿದವರು ಗ್ರೀಕರು. ಶಿಲ್ಪಶಾಸ್ತ್ರದಲ್ಲಿ ಅಸಮಾನ ಚಾತುರ್ಯವನ್ನು ಗಳಿಸಿದರು.



ಪುರಾತನ ಗ್ರೀಕ್ ಪ್ರತಿಮೆಗಳಲ್ಲೊಂದು. ಇದು ವೀರಸೊಬ್ಬನದು. ಇದರಲ್ಲಿ ಶಿಲ್ಪಕಲೆಯ ನೈಪುಣ್ಯತೆಯನ್ನು ಕಾಣಬಹುದು

ಮಾನವ ಸ್ವರೂಪವನ್ನು ಇನ್ನೂ ಉತ್ತಮ ರೀತಿಯಲ್ಲಿ ಮನೋರಂಜಕ ರೀತಿಯಲ್ಲಿ ಕೆತ್ತುತ್ತಿದ್ದರು.

**ರಾಜ್ಯಾಡಳಿತ**

ಗ್ರೀಕ್ ಪ್ರಪಂಚದ ಆಡಳಿತ ಸೂತ್ರ ಶ್ರೀಮಂತರ ಕೈಯಲ್ಲಿತ್ತು. ಪಟ್ಟಣಗಳಲ್ಲಿ ವಾಸಮಾಡುವ ನಾಗರಿಕ ಜನಗಳ ಗುಂಪದು. ಅವರ ಹೊಲ ಗದ್ದೆಗಳಲ್ಲಿ ಅವರಿಗಾಗಿ ಸಾಮಾನ್ಯ ಜನರು ದುಡಿಯುತ್ತಿದ್ದರು. ಅವರು ಸ್ವಂತವಾಗಿ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ.

ಗ್ರೀಕನಿಗೆ ತನ್ನ ದೇಶವೆಂದರೆ ಬಹಳ ಪ್ರೀತಿ. ಅದರ ಗೌರವ ಕಾಪಾಡಲು ಅದರ ಸ್ವಾತಂತ್ರ್ಯ ಉಳಿಸಲು ತಾನೇ ಬಲಿಯಾಗಲು ಹಿಂದು ಮುಂದು ನೋಡುತ್ತಿರಲಿಲ್ಲ. ದೇಶಕ್ಕಾಗಿ ಹೊಡೆದಾಡಲು ಜನ ಬಲಿಷ್ಠ ರಾಗಿರಬೇಕೆಂಬ ನಂಬಿಕೆಯಿತ್ತು. ಗ್ರೀಕನು ಕೂಸಾಗಿದ್ದಾಗಲಿಂದಲೂ ಯೋಧನಾಗಲು ಅರ್ಹನಾಗುವಂತೆ ಬೆಳವಣಿಗೆ ಶಿಕ್ಷಣ ಸಿಗುತ್ತಿತ್ತು. ಸ್ಪಾರ್ಟ ದೇಶದಲ್ಲಿ ಒಂದು ನಡವಳಿ ಇತ್ತು. ಹುಟ್ಟಿದ ಮಕ್ಕಳನ್ನೆಲ್ಲಾ ಊರ ಹತ್ತಿರದ ಬೆಟ್ಟದ ಮೇಲೆ ಒಂದು ರಾತ್ರಿ ಇಡುತ್ತಿದ್ದರು. ಆ ಮಗು ಯಾವ ಎಚ್ಚರಿಕೆಯೂ ಇಲ್ಲದೆ ವಾತಾವರಣದ ಹಾವಳಿ ತಾಳಿ ಕೊಂಡು ಬದುಕಿದರೆ ಆಗ ಅದು ದೊಡ್ಡದಾಗಲು ಯೋಗ್ಯವಾದುದು ಎಂದು ಮನೆಗೆ ತಂದು ರಕ್ಷಿಸಲಾಗುತ್ತಿತ್ತು. ಸತ್ತರೆ ಅದು ಬದುಕಲು ಯೋಗ್ಯವಾದುದಲ್ಲ, ಸತ್ತದ್ದು ಒಳ್ಳೆಯದೇ ಆಯಿತೆಂದುಕೊಳ್ಳಲಾಗುತ್ತಿತ್ತು.

ಗ್ರೀಸ್ ರಾಜ್ಯಗಳಲ್ಲಿ ಆಡಳಿತಕ್ರಮ ಬಹಳ ಉತ್ತಮ ರೀತಿಯಲ್ಲಿ ಬೆಳೆಯಿತು. ನೇರವಾಗಿ ತಾವೇ ಆಡಳಿತದಲ್ಲಿ ಭಾಗವಹಿಸಲು ಜನರಿಗೆ ತುಂಬಾ ಆಸೆ. ಅಲ್ಲಲ್ಲೆ ರಾಜರಿದ್ದರೂ ಕ್ರಿ. ಪೂ. ಆರನೆ ಶತಮಾನ ದಲ್ಲಾಗಲೆ ಪ್ರಜಾಪ್ರಭುತ್ವಕ್ಕೆ ಜನರು ತುಂಬ ಒಲಿದಿದ್ದರು. ಮುಂದೆ ಈ ರೀತಿಯಲ್ಲಿ ಗ್ರೀಕ್ ಜನರು ಇಂದಿಗೂ ಮಾದರಿಯಾಗಿ ಆಡಳಿತ ನಡೆಸಿದರು. ಆ ವಿಷಯ ಅಥೆನ್ಸ್ ಮೊದಲಾದ ದೇಶಗಳಲ್ಲಿ ಜ್ಞಾನಿಗಳ ಮತ್ತು ಸಾಹಸಿಗಳ ಉದ್ಭವ, ಅವರು ಸಾರಿದ ತತ್ವಗಳ, ಅವರು ಎಸಗಿದ ಸಾಹಸಗಳ ಕಥೆ ಮುಂದೆ.

## ರೋಂ ಸಾಮ್ರಾಜ್ಯ



ಈಗ ನಾವು ಹಳೆಯ ಪ್ರಪಂಚದ ಚರಿತ್ರೆಯ ಕೊನೆಕೊನೆಗೆ ಬಂದ ರೋಂ ಸಾಮ್ರಾಜ್ಯದ ವಿಷಯ ತಿಳಿದು ಈ ಅಧ್ಯಾಯ ಮುಗಿಸೋಣ. ಇಲ್ಲಿ ನಾವು ಇತಿಹಾಸದಲ್ಲಿ ನಿಜವಾಗಿಯೂ ಬಹಳ ದೊಡ್ಡ ಭಾಗವನ್ನು ವಹಿಸಬೇಕಾಗಿದ್ದ ಪಟ್ಟಣವೊಂದು ಉದಯವಾದ್ದನ್ನು ನೋಡುತ್ತೇವೆ. ಇದೇ ರೋಂ ಪಟ್ಟಣ.

ಕ್ರಿ.ಪೂ. ೧೨ನೆ ಶತಮಾನಕ್ಕೆ ಮುಂಚೆ ಇಟಲಿ ಬೆಟ್ಟಕಾಡುಗಳಿಂದ ತುಂಬಿದ ಪ್ರದೇಶವಾಗಿತ್ತು; ಅಲ್ಲಿ ಜನಸಾಂದ್ರತೆಯೂ ಬಹಳ ಕಮ್ಮಿ ಇತ್ತು. ಆರ್ಯಕುಲದವರಾಗಿದ್ದು ಲ್ಯಾಟಿನ್ ಭಾಷೆಯಾಡುತ್ತಿದ್ದ ಜನರು ಈ ಇಟಲಿ ಪರ್ಯಾಯದ್ವೀಪಕ್ಕೆ ಬಂದು ನೆಲಸಿದರು. ಚಿಕ್ಕ ಚಿಕ್ಕ ಊರುಗಳನ್ನೂ ಪಟ್ಟಣಗಳನ್ನೂ ನಿರ್ಮಿಸಿಕೊಂಡರು. ಕ್ರೀಟ್ ಸಾಮ್ರಾಜ್ಯ ಹಾಳಾದ ಮೇಲೆ ಅಲ್ಲಿನ ಜನರು ವಲಸೆ ಹೊರಟು ಇಟಲಿಯ ಪಶ್ಚಿಮ ತೀರದಲ್ಲಿ ನೆಲಸಿದರು. ಇವರು ಎಟ್ರಿಸ್ಕನರೆಂದು ಹೆಸರಾಗಿದ್ದಾರೆ. ಇವರು ಮೊದಲಿನ ನಿವಾಸಿಗಳನ್ನು ಗೆದ್ದು ಆಳತೊಡಗಿದರು. ಆದರೆ ಆರ್ಯಕುಲಕ್ಕೆಸೇರಿದ ಮೊದಲ ನಿವಾಸಿಗಳು ಒಗ್ಗಟ್ಟಾಗಿ ಚೇತರಿಸಿಕೊಂಡು ಟೈಬರ್‌ನದಿಯ ದಡದ ಮೇಲೆ ಪ್ರಸಿದ್ಧವಾದ ರೋಂ ಪಟ್ಟಣದ ಸ್ಥಾಪನೆಗೆ ಕಾರಣರಾದರು. ಈ ಪಟ್ಟಣದ ಸ್ಥಾಪನೆಯ ವಿಷಯದಲ್ಲಿ



ಸ್ವಾರಸ್ಯವಾದ ದಂತಕಥೆಯೊಂದು ಇದೆ. ರೋಂ ಪಟ್ಟಣದ ಸ್ಥಾಪನೆ ಕ್ರಿ. ಪೂ. ೭೫೩ ರಲ್ಲಿ ಎಂದು ಹೇಳುತ್ತಾರೆ. ಈ ಆರ್ಯರನ್ನು ಮತ್ತೆ ಎಟ್ರಿಸ್ಕನರು ಗೆದ್ದು ಆಳ ತೊಡಗಿದರು. ಕ್ರಿ. ಪೂ. ೫೧೦ ರಲ್ಲಿ ಮತ್ತೆ ಆರ್ಯಕುಲಕ್ಕೆ ಸೇರಿದವರು ಎಟ್ರಿಸ್ಕನರನ್ನು ಓಡಿಸಿ ಆಡಳಿತವನ್ನು ತಾವು ಪಡೆದರು. ಈ ಆಡಳಿತ 'ಪ್ಲೆಬಿಯನ್' ಎಂಬ ಶ್ರೀಮಂತರ ಒಂದು ಗುಂಪಿನ ಕೈಯಲ್ಲಿತ್ತು. ಲ್ಯಾಟಿನ್ ಭಾಷೆಯೊಂದು ಹೊರತು ಮಿಕ್ಕೆಲ್ಲ ವಿಷಯಗಳಲ್ಲಿಯೂ ಗ್ರೀಕ್ ಪ್ರಜಾಪ್ರಭುತ್ವವನ್ನು ಹೋಲುತ್ತಿತ್ತು. ರೋಂ ಸಾಮ್ರಾಜ್ಯದ ವೈಭವ ದಿನಗಳನ್ನು ನಾವು ಕ್ರಿ. ಪೂ. ೫೦೦ ರ ಮುಂದೆ ನೋಡುತ್ತೇವೆ.





## ಸಿಂಹಾವಲೋಕನ

ಹೀಗೆ ನಾವು ಜೀವದ ಮೊಟ್ಟಮೊದಲನೆಯ ಪ್ರಾರಂಭದಿಂದ ಹಿಡಿದು ಮಾನವಕುಲದ ಅಭಿವೃದ್ಧಿಯವರೆಗೆ ಬಂದಿದ್ದೇವೆ. ದೊಡ್ಡ ಹಿಮಯುಗಗಳು ಕಳೆದು ಭೂಮಿಯು ಕ್ರಮವಾಗಿ ಬಿಸಿಯೇರುತ್ತಾ ಹೋದ ಹಾಗೆಲ್ಲ ನವಶಿಲಾಯುಗದವರು ಹೇಗೆ ನಿಷ್ಕೃಷ್ಟವಾದ ಅಭಿವೃದ್ಧಿಯನ್ನು ಸಂಪಾದಿಸಲು ಪ್ರಯತ್ನಮಾಡಿದರೆಂಬುದನ್ನೂ ನಾವು ಈಕ್ಷಿಸಿದ್ದೇವೆ. ಈ ಮನುಷ್ಯರಲ್ಲಿ ಹೇಗೆ ಬಗೆಬಗೆಯ ಬುಡಕಟ್ಟುಗಳೇರ್ಪಟ್ಟವೆಂಬುದನ್ನೂ ನಾವು ಗುರುತಿಸಿದ್ದೇವೆ. ಮನುಷ್ಯನ ಹುಟ್ಟಿಗಿಂತ ಮೊದಲಿನ ಯುಗಗಳ ಕಾಲವನ್ನೂ ಮತ್ತು ಮಾನವ ಚರಿತ್ರೆಯ ಪ್ರಾರಂಭದ ಮೊದಲಿನ ಅನಾಗರಿಕತೆಯ ಕಾಲವನ್ನೂ ದಾಟಿದ್ದೇವೆ. ಮಾನವ ಚರಿತ್ರೆಯ ಅತಿ ಮಹತ್ತಾದ ವಿಷಯಗಳು ಬಹಳಮಟ್ಟಿಗೆ ಇನ್ನೂ ಅಂಧಕಾರಮಯವಾಗಿವೆ. ಆದರೂ ಈಗ ಗೊತ್ತಾಗಿರುವುದರಲ್ಲಿ ಮಾನವನು ಎಷ್ಟು ಅಂಧಕಾರ ಯುಗಗಳನ್ನು ಬೇನೆಪೂರಿತವಾಗಿ ದಾಟಿಬಂದಿದ್ದಾನೆ ಎಂಬುದನ್ನು ನಾವು ಸ್ಥೂಲವಾಗಿ ಮನಗಂಡಿದ್ದೇವೆ.

ಮೆಸೊಪೊಟೋಮಿಯಾ ಭೂಮಧ್ಯ ಸಮುದ್ರದ ಪ್ರಾಂತ ಭಾರತಭೂಮಿ ಮತ್ತು ಚೀನ ಈ ದೇಶಗಳ ಸಂಸ್ಕೃತಿಗಳ ಪ್ರಾಚೀನ ಸ್ವರೂಪ ಗಳನ್ನು ನಾವು ಸ್ವಲ್ಪಮಟ್ಟಿಗೆ ಇಣಿಕಿ ನೋಡಿದ್ದೇವೆ. ಇವುಗಳಲ್ಲಿ ಕ್ರಮೇಣ ಭೂಸೈನ್ಯದ ಬಲ ಮತ್ತು ಸಮುದ್ರದ ಮೇಲಿನ ಹಿಡಿತದಿಂದುಂಟಾದ ಪರಿಣಾಮವೂ ಕೊಂಚಮಟ್ಟಿಗೆ ಗೊತ್ತಾಗಿದೆ. ವ್ಯವಸಾಯ ಮತ್ತು ವ್ಯಾಪಾರ ಇವುಗಳನ್ನವಲಂಬಿಸಿ ಇವು ದೊಡ್ಡ ಸಾಮ್ರಾಜ್ಯಗಳಾಗಿ ಬೆಳೆದು ದನ್ನೂ ನಾವು ನೋಡಿದ್ದೇವೆ. ಅಸೂಯೆ ದುರಾಸೆಗಳ ಫಲವಾಗಿ ಹೇಗೆ ಒಂದು ಸಂಸ್ಕೃತಿ ಮತ್ತೊಂದು ಸಂಸ್ಕೃತಿಯಿಂದ ಹಾಳಾಗಿ ಒಂದು ಜನಾಂಗ ಮತ್ತೊಂದು ಜನಾಂಗಕ್ಕೆ ಬಲಿಯಾಗಿ ಒಂದು ಸಾಮ್ರಾಜ್ಯ ಮತ್ತೊಂದು ಸಾಮ್ರಾಜ್ಯದಿಂದ ಅಳಿಸಿಹೋಯಿತೆಂಬುದನ್ನೂ ಸ್ವಲ್ಪ ಮಟ್ಟಿಗೆ ಅರಿತಿದ್ದೇವೆ.

ಅಂತು ನಾವೀಗ ಆದಿಯಿಂದ ಕ್ರಿ. ಪೂ. ಆರನೆ ಶತಮಾನದವರೆಗೆ ಓಡುತ್ತ ಪ್ರಪಂಚ ಪರಿಚಯ ಮಾಡಿಕೊಂಡು ಬಂದಿದ್ದೇವೆ. ಈ ಮುಂದಿನ ಕಥೆಯನ್ನು ಇನ್ನೂ ಸ್ಪಷ್ಟವಾಗಿ ನಮಗೆ ಇತಿಹಾಸ ತಿಳಿಸುತ್ತದೆ. ಆ ಕಥೆ ಯಲ್ಲಿ ಅದ್ಭುತವಾದ ಘಟನೆಗಳು ನಡೆದಿವೆ. ಮಾನವಕುಲ ಮುಂದು ಹಿಂದು ನುಗ್ಗಿದೆ. ಮಹತ್ತರ ಸಾಹಸ ತೋರಿಸಿದೆ. ಅಸಾಧ್ಯವಾದ ಆಶ್ಚರ್ಯಕರವಾದ ಸಂಗತಿಗಳೆಲ್ಲ ಗೊತ್ತಾಗಿವೆ. ಈ ಕಥೆ ತಿಳಿಯುವುದೇ ಒಂದು ದೊಡ್ಡಾಸ್ತಿಕೆ! ಈ ಮಹತ್ತರವಾದ, ಅತಿ ಸ್ವಾರಸ್ಯವಾದ ಕಥೆಯನ್ನು ಮುಂದಿನ ಅಧ್ಯಾಯಗಳಲ್ಲಿ ನೋಡೋಣ.





ಗ್ರಾಮಸೇವಾ ಮುದ್ರಾಲಯದಲ್ಲಿ ಮುದ್ರಿಸಲಾಯಿತು.